Now, therefore, in exercise of the powers cofnerred by clause 6,7,8 and 9 of the Sugarcane (Control) order 1966 read with CSR 1127, Dated:16th July 1966 of the Government of India in the Ministry of Food, Agriculture, Community Development and Co-Operation (Department of Food) the Government of Karnataka hereby makes the following orders namely:

**1. TITLE, COMMENCEMENT AND DURATION OF OPERATION:**

i) This Order may be called the Karnataka Sugarcane (Regulation of Distribution) Alagawadi Sri. Beereswara Sugars Ltd., Alagawadi, Raibag, Taluk, Belgaum District order 2007.

ii) It shall come into force at once and shall remain in force till withdrawn or repealed subject to amendments as the State Government may make from time to time.

**2. DEFINITIONS:** In this order:

a. Factory means the premises of the factory at Alagawadi, Owned by Alagawadi Sri Beereswara Sugars Ltd., Alagawadi, Raibag Taluk, Belgaum District, including the precincts of such factory.

b. 'Form' means a form appended to this order.

c. Words and expressions used in this order but not defined shall have the meaning assigned to them in clause 2 of the Sugarcane (Control) order 1966.

**3.** Determination of the quantity of Sugarcane required by the factory and reservation of the area for supply of sugarcane.

i) The crushing capacity of Alagawadi Sri Beereswara Sugars Ltd., being 2500 TCD. The quantity of Sugarcane required by the factory during a year is about 4.5 Lakh M.Ts to 5 Lakh M.Ts.

ii) The factory shall secure the sugarcane determined under sub clause (2) from the areas specified in schedule-I to this order which shall be the area reserved temporarily in the interest of farmers for supplying sugarcane to the factory concerned, till the new factories, likely to come up in that area are established.

**4. FIXIATION OF QUANTITY OF SUGARCANE TO BE SUPPLIED BY THE GROWER:**

Every grower of sugarcane in the area reserved temporarily as specified in Schedule-I shall supply to the factory ninety five percent of the sugarcane grown by each such grower Co-operative Society operating in the reserved area, through such society.

**5. AGREEMENT TO SUPPLY OR PURCHASE THE DETERMINED QUANTITY OF SUGARCANE.**

Every grower of sugarcane or a sugarcane grower Co-operative Society, supplying sugarcane to the factory and the factory shall enter in to agreement to supply or purchase as the case may be, the quantity of sugarcane determined under clause-4.

**6. PROHIBITION OF EXPORT OF SUGARCANE FROM AREA RESERVED TEMPRORARILY.**

No.Sugarcane shall be exported from the area reserved temporarily except under and in accordance with the conditions of a permit issued by the Deputy Commissioner in Form-I of Schedule-II.

**7. ISSUE OF PERMITS:**

i) Application for the grant of a permit under clause-6 shall bve made in form 2 of Schedule-II and shall be accompanied by a fee of Rs.5/- and an amount of Rs.100/- as security Deposit.

ii) If any condition of the permit is contravened, the Deputy Commissioner may after giving an opportunity to the person Concerned to show cause why the amount deposited by way of security or any part there of may not be forfeited, pass order forfeiting the whole or part of the amount deposited as security.

By order and in the Name of the Governor of Karnataka,
**P. ANANDA KUMAR**
Desk Officer (Sugar),
Commerce & Industries Department.

**SCHEDULE-I**

Following 12 Villages of Raibagh Taluk are withdrawn from Raibag Sahakari Sakkare Karkhane (N), Raibag Taluk, Belgaum District, are now allocated temporarily to Alagawadi Sri Beereswara Sugars Ltd., Alagawadi, Raibag Taluk, Belgaum District, for supply of Sugarcane.

1. Alagawadi 2. Basthawada 3. Nidagundi 4. Nilaji 5. Harogeri 6. Koligud 7. Yabaratti
8. Byakoda 9. Biranala 10. Savasuddi 11. Alakanur 12. Moraba.

**P. ANANDA KUMAR**
Desk Officer (Sugar),
Commerce & Industries Department.

**SCHEDULE-II- FORM-I**

***(See Clause 6)**

The Karnataka Sugarcane (Regulation of Distribution), Alagawadi Sri Beereswara Sugars Ltd., Alagawadi, Raibag Taluk, Belgaum District order 2007.

**Permit No.** **Date:**

1. Full name of the permit holder :
2. Father's Name :
3. Residential Addres in full :
4. Quantity of Sugarcane for which permit is granted for export :
5. Area and village from which Sugarcane is permitted to be Exported. :
6. A. Place to which it is to be exported
   B. The purpose for which export is permitted.
   i. For Sale :
   ii. For crushing sugar cane juice for Manufacture of Gur/Sakkare Gul/ Jaggery Rabi or Khandasari. :
7. Their permit is valid up to :
8. The permit is granted subject to the following terms and conditions :
   a) Permit is not transferable.
   b) The permit shall be produced on demand by an officer authorized by the Deputy Commissioner.
   c) On expiry of the validity of the permission within 48 hours of the expiry of the validity date the permit shall be surrendered to the permit issuing authority.

Place: SIGNATURE OF THE PERMIT
Date: ISSUING AUTHORITY.

**SCHEDULE-II-FORM-II**

**(See Clause 7)**

The Karnataka Sugarcane (Regulation of Distribution), Alagawadi Sri. Bireswara Sugars Ltd., Alagawadi, Raibag Taluk, Belgaum District Order 2007.

Application for the grant of permit for exporting sugarcane from a reserved area.

1. Full Name of the Applicant :
2. Father's Name :
3. Residential Address in full :
4. Qunatitiy of Sugarcane for which permit is requested for export :
5. Area and the village from which Sugarcane is intended to be exported :
6. The purpose for which the export is intended :
   i) Fore Sale :
   ii) For Crushing Sugarcane Juice or manufacture of Gur/Sakkare Gul/Jaggery/ Rabi/ or Khandasari for sale or self consumption. :

I declare that, I am fully aware of the provisions of the Karnataka Sugarcane (Regulation of Distribution), Alagawadi Sri. Bireswara Sugars Ltd., Alagawadi, Raibag Taluk, Belgaum District order 2007 and the particulars furnished in the application are true to the best of my knowledge and belief and the permit to be issued will be properly used for the purpose for which it is issued. I have actually read-got read and understood the conditions of the permit given in Form No.1 of the Schedule appended to the Karnataka Sugarcane (Regulation of Distribution), Alagawadi Sri. Bireswara Sugars Ltd., Alagawadi, Raibag Taluk, Belgaum District Order 2007 and I agree to abide by them.

Place:

Date: SIGNATURE OF THE APPLICANT.

**P. ANANDA KUMAR**

PR-96 Desk Officer (Sugar),

Commerce & Industries Department.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು-1 ಬೆಂಗಳೂರುನಗರ ಜಿಲ್ಲೆ, ನಂ.146, 3ನೇ ಮುಖ್ಯ ರಸ್ತೆ, 8ನೆ ಮಾರ್ಗೋಸ ರಸ್ತೆ, ರಸ್ತೆ, ಬೆಂಗಳೂರು-560 003, ಇವರ ಕಾರ್ಯಾಲಯ

## ಅಧಿಸೂಚನೆ

**ಕ್ರಮ ಸಂಖ್ಯೆ: ಡಿಆರ್‌ಬಿ-1/ ಸಮಾಪನೆ/ 39/ 2006-07, ದಿನಾಂಕ:28ನೇ ಡಿಸೆಂಬರ್, 2006**

**ವಿಷಯ:** ಕರ್ನಾಟಕ ಅರ್ಬನ್ ಹೌಸಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ., ಬಸವೇಶ್ವರನಗರ, ಬೆಂಗಳೂರು ಈ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರ ಸಂಖ್ಯೆ: ಸಿಓ/ 20/ ಪಿಎಲ್‌ಎಂ/ 2006/ ದಿನಾಂಕ:23.06.2006.

2. ಸ.ಸಂ. ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಎಆರ್‌ಬಿ-44/ ಸಮಾಪನೆ/ 18/ 2006-07 ದಿನಾಂಕ:12.12.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು ಒಂದನೇ ವಲಯ ಇವರು ಉಲ್ಲೇಖ (2)ರಲ್ಲಿ ಕಾಣಿಸಿರುವ ದಿನಾಂಕ:12.12.2006ರ ಪತ್ರದ ಮೂಲಕ ಕರ್ನಾಟಕ ಅರ್ಬನ್ ಹೌಸಿಂಗ್ ಕೋ-ಆಪರೇಟಿವ್ ಸೊಸೈಟಿ ನಿಯಮಿತ, ಬಸವೇಶ್ವರ ನಗರ, ಬೆಂಗಳೂರು ಈ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72ರ ರೀತ್ಯಾ ಸಮಾಪನೆಗೊಳಿಸಲು ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಈ ಕೆಳಕಂಡಂತೆ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವುದಾಗಿ ತಿಳಿಸಿರುತ್ತಾರೆ.

1. ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು ಒಂದನೇ ವಲಯ ಇವರಿಂದ ನೋಂದಣಿ ಸಂಖ್ಯೆ: ಬಿ/ ಎಆರ್‌ಬಿ-1/ ಆರ್‌ಇಜಿಎನ್/ 2563/ 73-74 ದಿನಾಂಕ:18.07.1973 ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ಹೊಸಗುಡ್ಡದಹಳ್ಳಿ, ರಾಜಾಜಿನಗರ, 5ನೇ ಮತ್ತು 6ನೇ ಬ್ಲಾಕ್ ಪ್ರದೇಶಗಳಿಗೆ ಸೀಮಿತವಾಗಿರುತ್ತದೆ.
2. ಸಂಘವು ಸ್ಥಾಪನೆಯಾಗಿ 33 ವರ್ಷಗಳು ಕಳೆದಿದ್ದರೂ ಇದುವರೆಗೂ ಸಕ್ರಮವಾದ ಬಡಾವಣೆಯನ್ನು ರಚನೆ ಮಾಡಲು ವಿಫಲರಾಗಿರುತ್ತಾರೆ. ಮಾಡಿರುವ ಒಂದು ಬಡಾವಣೆಯ ಸಂಬಂಧವಾಗಿ ಸುಮಾರು 30 ವರ್ಷಗಳಿಂದಲೂ ವ್ಯಾಜ್ಯಗಳು, ತಂಟೆ-ತಕರಾರುಗಳು ನಡೆದುಕೊಂಡು ಬಂದಿದ್ದು, ಇದುವರೆಗೂ ಸಂಪೂರ್ಣವಾಗಿ ಇತ್ಯರ್ಥವಾಗಿರುವುದಿಲ್ಲ.
3. ದಿನಾಂಕ:27.02.1977 ರಂದು ಏರ್ಪಡಿಸಿದ್ದ ಸರ್ವ ಸದಸ್ಯರ ಮಹಾಸಭೆಯು ಆಡಳಿತ ಮಂಡಳಿಯಲ್ಲಿದ್ದ ಗುಂಪುಗಾರಿಕೆ, ಒಳಜಗಳ, ವೈಮನಸ್ಸು, ತಂಟೆ, ತಕರಾರುಗಳಿಂದಾಗಿ ಪೂರ್ಣಗೊಂಡಿರುವುದಿಲ್ಲ. ಮಹಾಸಭೆಯಲ್ಲಿ ವಿವಿಧ ಕಾರಣಗಳಿಂದಾಗಿ ಆಡಳಿತ ಮಂಡಳಿಯಲ್ಲಿ ಗುಂಪುಗಾರಿಕೆ ಉಂಟಾಗಿದ್ದರಿಂದ ಎರಡು ಗುಂಪುಗಳಾಗಿ ಕಾರ್ಯನಿರ್ವಹಿಸಲು ಪ್ರಾರಂಭಿಸಿರುತ್ತದೆ. ಈ ಮಹಾಸಭೆಯ ನಂತರ ಆಡಳಿತ ಮಂಡಳಿಯವರು ಎರಡೂ ಗುಂಪುಗಳಾಗಿ-ಎರಡು ಸಂಘದ ಕಛೇರಿಗಳನ್ನು ಮಾಡಿಕೊಂಡು ಪ್ರತ್ಯೇಕ-ಪ್ರತ್ಯೇಕವಾಗಿ ದಾಖಲಾತಿಗಳನ್ನು ಸೃಷ್ಟಿಸಿಕೊಂಡು ಕಾರ್ಯನಿರ್ವಹಿಸಿರುತ್ತವೆ ಮತ್ತು ತಮ್ಮದೇ ನಿಜವಾದ ಆಡಳಿತ ಮಂಡಳಿ ಎಂದು ಪ್ರತಿಪಾದಿಸಿಕೊಂಡು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯ ಇವರ ನ್ಯಾಯಾಲಯದಲ್ಲಿ 83/ 78-79, ಕೆ.ಎ.ಟಿ.ಯಲ್ಲಿ ಅಪೀಲು ಸಂಖ್ಯೆ: 431/ 88 ಮತ್ತು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 18141/ 1988 ರಂತೆ ವಿವಿಧ ನ್ಯಾಯಾಲಯಗಳಲ್ಲಿ ವ್ಯಾಜ್ಯಗಳನ್ನು ಹೂಡಿದ್ದು ತಕರಾರುಗಳನ್ನು ಬೆಳೆಸಿಕೊಂಡು ಬಂದಿದ್ದು, ಆಡಳಿತ ಮಂಡಳಿಯ ವಿಚಾರದಲ್ಲೇ ವಿವಿಧ ನ್ಯಾಯಾಲಯಗಳಲ್ಲಿ 21 ವರ್ಷಗಳು ವ್ಯಾಜ್ಯಗಳನ್ನು ನಡೆಸಿಕೊಂಡು ಬಂದಿರುತ್ತಾರೆ. ಇಂದಿಗೂ ಸಹ ಸಂಘದ ಸಮಸ್ಯೆಗಳು, ತಂಟೆ ತಕರಾರುಗಳನ್ನು ಪರಿಹರಿಸಲು ಸಾಧ್ಯವಾಗದೆ ಮುಂದುವರಿದಿರುತ್ತದೆ.
4. ಸಂಘದ ವ್ಯವಹಾರವನ್ನು ದಿನಾಂಕ:27.02.77ರ ಅಪೂರ್ಣಗೊಂಡ ಮಹಾಸಭೆಯ ನಂತರ ಆಡಳಿತ ಮಂಡಳಿಯ ವಿವಿಧ 3 ಗುಂಪುಗಳು ಹಾಗೂ ಆಡಳಿತಾಧಿಕಾರಿಗಳು ಕಾರ್ಯನಿರ್ವಹಿಸಿರುತ್ತಾರೆ. ಈ ರೀತಿಯಾಗಿ ಪ್ರತ್ಯೇಕವಾಗಿ ಕಾರ್ಯಚಟುವಟಿಕೆಗಳನ್ನು ನಡೆಸಿಕೊಂಡು ಬಂದಿರುವ ಈ ಗುಂಪಿನವರು ತಾವು ನಿರ್ವಹಣೆ ಮಾಡಿರುವ ಎಲ್ಲಾ ದಾಖಲಾತಿಗಳನ್ನು 1998ರಲ್ಲಿ ನೇಮಕಗೊಂಡಿದ್ದ ಆಡಳಿತಾಧಿಕಾರಿಗಳ ವಶಕ್ಕೆ ನೀಡಲು ಸಾಧ್ಯವಾಗಿರುವುದಿಲ್ಲ. ಇದರಿಂದ 1974-75ರ ನಂತರ ಲೆಕ್ಕಪರಿಶೋಧನೆಯನ್ನು ಮಾಡಿಸಲು ವಿಫಲರಾಗಿರುತ್ತಾರೆ. ಹೀಗಾಗಿ ಸಂಘದ ಆರ್ಥಿಕ ಪರಿಸ್ಥಿತಿ, ಸಂಘದ ಪ್ರಗತಿ ಸಾಧನೆ ಯಾವುದನ್ನೂ ಪರಿಶೀಲಿಸಿ ಅವಲೋಕಿಸಲು ಸಾಧ್ಯವಾಗಿರುವುದಿಲ್ಲ. ಸಂಘದ

ಸಮಸ್ತ ದಾಖಲಾತಿಗಳ ಗೈರುಹಾಜರಿಯಲ್ಲಿ ಒಟ್ಟಾರೆ 1975-76 ರಿಂದ 2005-06ನೇ ಸಾಲುಗಳವರೆಗೆ ಅಂದರೆ 31 ವರ್ಷಗಳಿಂದ ಆಡಿಟ್ ಮಾಡಿಸಲು ಬಾಕಿ ಉಳಿದುಕೊಂಡಿರುತ್ತದೆ.

5. ಹಿಂದೆ 3 ಗುಂಪಿನ ಆಡಳಿತ ಮಂಡಳಿ ಸದಸ್ಯರು ಹಾಗೂ 1979ರಲ್ಲಿ ಆಡಳಿತಾಧಿಕಾರಿಯಾಗಿ ನೇಮಕಮಾಡಿದ್ದ ಆಡಳಿತಾಧಿಕಾರಿ (ಶ್ರೀ ಚಂದ್ರಶೇಖರ ಮೂರ್ತಿ, ನಿವೃತ್ತ ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು ಇವರು ಶ್ರೀ ಚಿಕ್ಕಪುಟ್ಟಯ್ಯ- ಶ್ರೀ ಲಕ್ಕಪ್ಪ ಗುಂಪಿನವರಿಂದ ಕೆಲವೊಂದು ದಾಖಲತಿಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದರ ಬಾಬ್ತು) ಇವರುಗಳಿಂದ ತಮ್ಮ ವಶದಲ್ಲಿರುವ ಎಲ್ಲಾ ದಾಖಲಾತಿಗಳನ್ನು ಆಡಳಿತಾಧಿಕಾರಿಗಳ ವಶಕ್ಕೆ ನೀಡಲು ವಿಫಲರಾಗಿರುತ್ತಾರೆ. ಇದರಿಂದಾಗಿ ಒಗ್ಗೂಡಿಸಿದ ದಾಖಲಾತಿಗಳನ್ನು ರಚಿಸಿ 31 ವರ್ಷಗಳಿಂದಲೂ ಬಾಕಿ ಇರುವ ಆಡಿಟ್ ಮಾಡಿಸಲು ಸಾಧ್ಯವಾಗಿಲ್ಲದ ಕಾರಣ ಸಂಬಂಧಪಟ್ಟ ಈ ಎಲ್ಲರಿಗೂ ಆಡಳಿತಾಧಿಕಾರಿಗಳು ಲಿಖಿತ ಮೂಲಕ ಸೂಚನಾ ಪತ್ರಗಳನ್ನು ಜಾರಿಮಾಡಲಾಗಿರುತ್ತದೆ. ಆದಾಗ್ಯೂ ದಾಖಲಾತಿಗಳನ್ನು ಆಡಳಿತಾಧಿಕಾರಿಗಳ ವಶಕ್ಕೆ ನೀಡಲು ವಿಫಲರಾಗಿರುತ್ತಾರೆ. ಆದ್ದರಿಂದ ಕಲಂ 109 ರಡಿಯಲ್ಲಿ ಕ್ರಮ ಇಡಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯ, ಬೆಂಗಳೂರು ಇವರಿಗೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಬೇಕಾಗಿರುತ್ತದೆ. ಈ ಬಗ್ಗೆ ಸಂಬಂಧಪಟ್ಟವರಿಗೆ ನೋಟೀಸ್ ಜಾರಿ ಮಾಡಲು ಕ್ರಮಕೈಗೊಂಡಿದ್ದರೂ ಮುಂದಿನ ಕ್ರಮದ ನಡವಳಿಕೆಗಳು ಪೂರ್ಣಗೊಂಡಿರುವುದಿಲ್ಲ. ಈ ಎಲ್ಲಾ ನಡವಳಿಕೆಗಳು ಪೂರ್ಣಗೊಂಡು ದಾಖಲಾತಿಗಳನ್ನು ವಶಕ್ಕೆ ನೀಡಲು ವಿಫಲರಾಗಿರುವವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ನಡೆಸಿ ಪೂರ್ಣವಾಗಿ ಇತ್ಯರ್ಥವಾಗಲು ಹಲವಾರು ವರ್ಷಗಳು ಸಮಯ ತೆಗೆದುಕೊಳ್ಳುವ ಸಾಧ್ಯತೆಗಳು ಇರುವುದರಿಂದ ಈಗ ಸದ್ಯಕ್ಕೆ ಆಡಿಟ್ ಮಾಡಿಸುವ ಸಾಧ್ಯತೆಗಳು ಕಂಡುಬರುತ್ತಿಲ್ಲ. ಇದರಿಂದ ಇನ್ನಷ್ಟು ಸಮಸ್ಯೆಗಳು ಉಂಟಾಗಿ ಪರಿಸ್ಥಿತಿಯನ್ನು ಪರಿಹರಿಸಲು ಸಾಧ್ಯವಿಲ್ಲದ ಹಂತಕ್ಕೆ ತಲುಪಲು ಕಾರಣಗಳಾಗಿರುತ್ತದೆ.

6. ಸಂಘದ ಪ್ರಾರಂಭಿಕ ಎಲ್ಲಾ ದಾಖಲಾತಿಗಳನ್ನು ಹಾಗೂ ಗುಂಪುಗಳಾಗಿ ನಿರ್ವಹಿಸಿರುವ ಎಲ್ಲಾ ದಾಖಲಾತಿಗಳು ಲಭ್ಯವಿಲ್ಲದ ಕಾರಣ ನೈಜವಾದ-ಅರ್ಹರಾದ-ನಿಖರವಾದ ಸದಸ್ಯರ ಪಟ್ಟಿಯನ್ನು ತಯಾರಿಸಲು ಸಾಧ್ಯವಾಗಿರುವುದಿಲ್ಲ. ದಾಖಲಾತಿಗಳ ಗೈರುಹಾಜರಿಯಲ್ಲಿ ಹಿರಿಯ ಸದಸ್ಯರು ಮತ್ತು ನಿಜವಾದ ಮೂಲ ಸದಸ್ಯರು ಯಾರ್ಯಾರು ಎಂದು ಗುರುತಿಸಲು ಸಾಧ್ಯವಾಗುತ್ತಿಲ್ಲ.

7. ಈ ಹಿಂದಿನ ಆಡಳಿತಾಧಿಕಾರಿಗಳಾದ ಶ್ರೀ ಎ.ಆರ್.ಡಾಂಗೆ, ಶ್ರೀ ಮೋಹನ್ ಕುಮಾರ್, ಶ್ರೀ ಎಸ್. ಮೆಹಬೂಬ್ ಇವರು ದಾಖಲಾತಿಗಳನ್ನು ಪಡೆಯಲು ಹಲವಾರು ಪ್ರಯತ್ನಗಳನ್ನು ಮಾಡಿರುವುದರ ಜೊತೆಗೆ ಸಾರ್ವಜನಿಕರ ಹಾಗೂ ಸದಸ್ಯರ ಅನುಕೂಲಕ್ಕಾಗಿ ದಿನಪತ್ರಿಕೆಗಳಲ್ಲಿ ಪ್ರಕಟಣೆ ನೀಡಲಾಗಿದ್ದರೂ ಸಹ ಅಗತ್ಯವಾದ ಎಲ್ಲಾ ದಾಖಲಾತಿಗಳನ್ನೂ ಪಡೆಯಲು ಸಾಧ್ಯವಾಗಿರುವುದಿಲ್ಲ. ಶ್ರೀ ಚಿಕ್ಕಪುಟ್ಟಯ್ಯ- ಶ್ರೀ ಲಕ್ಕಪ್ಪ ಗುಂಪಿನವರು ಮಾತ್ರ ಪ್ರತ್ಯೇಕವಾಗಿ ಗುಂಪುಗಳಾಗಿ ನಿರ್ವಹಿಸಿದ ಸಂಘದ ವ್ಯವಹಾರಕ್ಕೆ ಸಂಬಂಧಪಟ್ಟಿರುವ ಕೆಲವೊಂದು ದಾಖಲಾತಿಗಳನ್ನು ದಿನಾಂಕ:27.09.1999ರಲ್ಲಿ ಆಡಳಿತಾಧಿಕಾರಿಯಾಗಿದ್ದ ಶ್ರೀ ಮೋಹನ್ ಕುಮಾರ್ ರವರ ವಶಕ್ಕೆ ದಾಖಲಾತಿಗಳನ್ನು ನೀಡಿರುತ್ತಾರೆ. ಉಳಿದ ಗುಂಪಿನವರು ದಾಖಲಾತಿಗಳನ್ನು ನೀಡಲು ವಿಫಲರಾಗಿರುವುದು ಕಂಡುಬಂದಿರುತ್ತದೆ. ಆದಾಗ್ಯೂ ನ್ಯಾಯಾಲಯದ ಆದೇಶದನ್ವಯ ಚುನಾವಣೆಯನ್ನು ನಡೆಸುವ ಸಲುವಾಗಿ ಸದಸ್ಯರ ಮತದಾರರ ಪಟ್ಟಿಯನ್ನು ಪ್ರಕಟಿಸಿ 2000-01 ರಿಂದ 2004-05ರ ಸಾಲುಗಳ ಅವಧಿಗಾಗಿ ದಿನಾಂಕ:16.08.2004 ರಂದು ಆಡಳಿತ ಮಂಡಳಿಗೆ ಚುನಾವಣೆಯನ್ನು ನಡೆಸಲು ಅಗತ್ಯವಾದ ಕ್ರಮ ಕೈಗೊಳ್ಳಲಾಗಿತ್ತು. ಆದರೆ ಆಡಳಿತ ಮಂಡಳಿಯ ಚುನಾವಣೆಯ ಸಂಬಂಧವಾಗಿ ಕೆಲವು ಅಭ್ಯರ್ಥಿಗಳು ಗೌರವ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 27447/ 2000 (ಸಿಎಸ್)ರಲ್ಲಿ ಸದಸ್ಯರ ಪಟ್ಟಿಯಲ್ಲಿರುವ ಗೊಂದಲದ ಬಗ್ಗೆ ಪ್ರಶ್ನಿಸಿದ್ದರಿಂದ ಮುಂದಿನ ಆದೇಶದವರೆಗೆ ಚುನಾವಣೆ ಫಲಿತಾಂಶವನ್ನು ಪ್ರಕಟಿಸದೆ ಇರುವಂತೆ ಆದೇಶ ಆಗಿತ್ತು. ದಿನಾಂಕ: 19.07.2002ರಲ್ಲಿ ರಿಟ್ ಅರ್ಜಿ ಇತ್ಯರ್ಥ ಆಗಿರುತ್ತದೆ. ಸದರಿ ರಿಟ್ ಅರ್ಜಿಯಲ್ಲಿ ಅರ್ಜಿದಾರರು ಸಂಘದ ಸದಸ್ಯತ್ವದ ಬಗ್ಗೆ ಪ್ರಶ್ನಿಸಿದ್ದು, ಈ ಸದಸ್ಯರ ಪಟ್ಟಿಯ ವಿಚಾರದಲ್ಲಿ ಸಕ್ಷಮ ಪ್ರಾಧಿಕಾರದ ಮುಂದೆ ದಾವೆ ಸಲ್ಲಿಸಿ ಪರಿಹಾರವನ್ನು ಕಂಡುಕೊಳ್ಳಲು ಅರ್ಜಿದಾರರಿಗೆ ಉಚ್ಚ ನ್ಯಾಯಾಲಯವು ಆದೇಶ ನೀಡಿರುತ್ತದೆ. ಸದರಿ ರಿಟ್ ಅರ್ಜಿಯಲ್ಲಿ ಫಲಿತಾಂಶವನ್ನು ಪ್ರಕಟಿಸುವ ಬಗ್ಗೆ ಸ್ಪಷ್ಟವಾಗಿ ಆದೇಶವನ್ನು ನೀಡಿರುವುದಿಲ್ಲ. ಈ ಮಧ್ಯೆ ರಿಟ್ ಅರ್ಜಿದಾರರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರಲ್ಲಿ ದಾವೆ ಸಂಖ್ಯೆ: ಎಆರ್‌ಬಿ/ ಎಬಿಎನ್/ ಇತರೆ/ 35/ 2004-05ರಂತೆ ಸದಸ್ಯರ ಪಟ್ಟಿ ಮತ್ತು ಆಡಳಿತಾಧಿಕಾರಿಗಳು ಪ್ರಕಟಿಸಿರುವ ಸದಸ್ಯತ್ವದ ಬಗ್ಗೆ ಪ್ರಶ್ನಿಸಿ ವ್ಯಾಜ್ಯವನ್ನು ಹೂಡಿದ್ದು, ಇತ್ಯರ್ಥವಾಗಲು ಬಾಕಿ ಇರುತ್ತದೆ. ಈ ರೀತಿಯಾಗಿ ಈ ಹಿಂದೆ ನಡೆಸಿರುವ ಚುನಾವಣೆ ಸಂಬಂಧವಾಗಿ ಆಡಳಿತಾಧಿಕಾರಿಗಳು ಪ್ರಕಟಿಸಿದ್ದ ಸದಸ್ಯರ ಪಟ್ಟಿಯ ವಿಚಾರದಲ್ಲಿ ಹೂಡಿರುವ ಕಲಂ 70ರಡಿಯಲ್ಲಿನ ವ್ಯಾಜ್ಯ ಪ್ರಕರಣ ಇತ್ಯರ್ಥವಾಗಿಲ್ಲದೆ ಇರುವುದರಿಂದ ಈಗ ಮತ್ತು ಸಂಘದ ದಾಖಲಾತಿಗಳ ಗೈರುಹಾಜರಿಯಲ್ಲಿ ಚುನಾವಣೆಯನ್ನು ನಡೆಸುವುದು ಗೌರವ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಆದೇಶ ಸಂಖ್ಯೆ: 27447/ 2000ರ ಪ್ರಕಾರವಾಗಿ ಕಾರ್ಯನಿರ್ವಹಿಸದೆ ಉಲ್ಲಂಘಿಸಿದಂತಾಗುತ್ತದೆ.

8. ಈ ಹಿಂದೆ ಆಡಳಿತಾಧಿಕಾರಿಗಳು ಪ್ರಕಟಿಸಿರುವ ಸದಸ್ಯರ ಪಟ್ಟಿಯು ಹಿಂದಿನ ಆಡಳಿತ ಮಂಡಳಿಯ ಎರಡು ಗುಂಪಿನವರು ನೀಡಿರುವ ಸದಸ್ಯರ ಪಟ್ಟಿಯಿಂದ ಒಗ್ಗೂಡಿಸಿ ಪಟ್ಟಿಯನ್ನು ತಯಾರಿಸಲಾಗಿದೆ. ಆದರೆ ಇದಕ್ಕೆ ಪೂರಕವಾಗಿ ನಿರೂಪಿಸುವಂತಹ ಸ್ಪಷ್ಟ ನಿಖರವಾದ ದಾಖಲಾತಿಗಳು ಇರುವುದಿಲ್ಲ. ಸದಸ್ಯರಲ್ಲಿ ಹಾಗೂ ಸಾರ್ವಜನಿಕರಲ್ಲಿ ಈ ಸಂಬಂಧವಾಗಿ ತಮ್ಮಲ್ಲಿರುವ ದಾಖಲಾತಿಗಳನ್ನು ನೀಡಲು ದಿನಾಂಕ:27.09.2005ರ 'ಸಂಜೆವಾಣಿ' ದಿನಪತ್ರಿಕೆಯಲ್ಲಿ ಪ್ರಕಟಿಸಿದ್ದರೂ ಪ್ರಯೋಜನವಾಗಿರುವುದಿಲ್ಲ. ಯಾರೂ ಸಹ ದಾಖಲಾತಿಗಳನ್ನು ಆಡಳಿತಾಧಿಕಾರಿಗಳ ವಶಕ್ಕೆ ನೀಡಿರುವುದಿಲ್ಲ ಮತ್ತು ಹಿಂದಿನ ಆಡಳಿತ ಮಂಡಳಿಯವರು (ಶ್ರೀ ಚಿಕ್ಕಪುಟ್ಟಯ್ಯ- ಶ್ರೀ ಲಕ್ಕಪ್ಪ ಗುಂಪಿನವರು ದಿನಾಂಕ:27.09.1999 ರಂದು ಕೆಲವೊಂದು ದಾಖಲಾತಿಗಳನ್ನು ಆಡಳಿತಾಧಿಕಾರಿಗಳ ವಶಕ್ಕೆ ನೀಡಿರುವುದು ಹೊರತುಪಡಿಸಿ) ಎಲ್ಲಾ ಮೂಲ ದಾಖಲಾತಿಗಳನ್ನು ಆಡಳಿತಾಧಿಕಾರಿಯವರ ವಶಕ್ಕೆ ನೀಡಿರುವುದಿಲ್ಲ. ಹೀಗಾಗಿ ನಿಖರವಾದ ಸದಸ್ಯರ ಪಟ್ಟಿಯನ್ನು ತಯಾರಿಸಿ ಮುಖ್ಯವಾದ ಪಾರದರ್ಶಕವಾದ ನೈಜ್ಯತೆಯಿಂದ ಕೂಡಿದ ಸದಸ್ಯರ ಪಟ್ಟಿಯೊಂದಿಗೆ ಚುನಾವಣೆಯನ್ನು ನಡೆಸಲು ಸಾಧ್ಯವಾಗುತ್ತಿಲ್ಲ ಮತ್ತು 1975-76ನೇ ಸಾಲಿನಿಂದ ಆಡಿಟ್ ಸಹ ಮಾಡಿಸಲು ಸಾಧ್ಯವಾಗುತ್ತಿಲ್ಲ.

9. ಸಂಘವು ತನ್ನ ಸದಸ್ಯರಿಗೆ ನಿವೇಶನಗಳನ್ನು ಕೊಡಿಸಿಕೊಡುವ ಉದ್ದೇಶಕ್ಕಾಗಿ ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ, ಅಗ್ರಹಾರ ದಾಸರಹಳ್ಳಿ ಗ್ರಾಮದ ಸರ್ವೆ ನಂ. 60/1, 61/1 ಮತ್ತು 69/2 ರಲ್ಲಿನ ಜಮೀನು ಖರೀದಿಸಲು ಜಮೀನುದಾರರು-ಜಿ.ಪಿ.ಎ.ದಾರರೊಂದಿಗೆ ಕರಾರು ಮಾಡಿಕೊಂಡಿರುವುದು ಕಂಡುಬಂದಿರುತ್ತದೆ. ಆದರೆ ಸದರಿ ಜಮೀನನ್ನು ಸಂಘವು ಕರಾರು ಮಾಡಿಕೊಳ್ಳುವ ಮೊದಲೇ ಹಿಂದಿನ ಸಿ.ಐ.ಟಿ.ಬಿ. ಹಾಲಿ ಬಿ.ಡಿ.ಎ. ನವರು ವೆಸ್ಟ್‌ಆಫ್ ಕಾರ್ಡ್ ರಸ್ತೆ, 4ನೇ ಹಂತಕ್ಕೆ

ಸ್ವಾದೀನಪಡಿಸಲು ಅಧಿಸೂಚನೆಗಳನ್ನು ಹೊರಡಿಸಿರುವುದು ಕಂಡುಬಂದಿರುತ್ತದೆ. ಸದರಿ ಜಮೀನಿನ ಮಾಲೀಕತ್ವದ ಬಗ್ಗೆ ಸರ್ವೆ ನಂ.60/1, 61/1ರ ಬಗ್ಗೆ ಸಂಘಕ್ಕೆ ಭೂ ಮಾಲೀಕರು ಹಾಗೂ ಬೆಂಗಳೂರು ವೆಸ್ಟ್ ಡಿವಿಜನ್ ಪೋಸ್ಟಲ್ ಎಂಪ್ಲಾಯಿಸ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇವರ ನಡುವೆ ಹಾಗೂ ಖಾಸಗಿಯವರ ನಡುವೆ ವಿವಿಧ ನ್ಯಾಯಾಲಯಗಳಲ್ಲಿ ವ್ಯಾಜ್ಯಗಳು ನಡೆದಿರುತ್ತದೆ. ಇದೇ ರೀತಿಯಾಗಿ ಸರ್ವೆ ನಂಬರ್ 69/2 ರಲ್ಲಿನ ಜಮೀನು 2.20 ಎಕರೆ ಜಮೀನು ಬಗ್ಗೆ ಸಹ ಸಂಘವು ಭೂ ಮಾಲೀಕರ ಸಂಬಂಧಿಕರ-ಖಾಸಗಿಯವರಾದ ಶ್ರೀ ಎ. ಕೃಷ್ಣಪ್ಪ ಇವರ ನಡುವೆ ಈಗಲೂ ವಿವಿಧ ನ್ಯಾಯಾಲಯಗಳಲ್ಲಿ ವ್ಯಾಜ್ಯ ನಡೆದಿರುತ್ತದೆ ಹಾಗೂ ಈಗಲೂ ಈ ವ್ಯಾಜ್ಯಗಳು ನ್ಯಾಯಾಲಯಗಳಲ್ಲಿ ನಡೆಯುತ್ತಿರುತ್ತದೆ. ಸಂಘಕ್ಕೆ ಸಂಪೂರ್ಣವಾಗಿ ಜಮೀನಿನ ಒಡೆತನದ ಹಕ್ಕು ಮತ್ತು ಮಾಲೀಕತ್ವ ಇರುವುದು ಕಂಡುಬಂದಿರುವುದಿಲ್ಲ.

10. ಸರ್ವೆ ನಂ.60/1 ಮತ್ತು 61/1 ರ ಬಗ್ಗೆ ಸಿವಿಲ್ ನ್ಯಾಯಾಲಯದಲ್ಲಿ ನಡೆಯುತ್ತಿರುವಾಗಲೇ ಸಂಪೂರ್ಣವಾಗಿ ಸಂಘಕ್ಕೆ ಒಡೆತನದ ಹಕ್ಕು ಬದಲು ಬಾಕಿ ಇದ್ದು, ಕಂದಾಯ ಇಲಾಖೆಯ ದಾಖಲಾತಿಗಳಲ್ಲಿ ಸಂಘದ ಒಡೆತನದ ಹಕ್ಕು ನಮೂದಾಗುವ ಮೊದಲೇ ಒಂದು ಗುಂಪಿನ ಆಡಳಿತ ಮಂಡಳಿಯವರು ಬಿ.ಡಿ.ಎ. ಯಿಂದ ಬಡಾವಣೆಯ ನಕ್ಷೆ ಮಂಜೂರಾತಿ ಪಡೆದುಕೊಳ್ಳದೆ ಜೇಷ್ಠತೆಯನ್ನು ಕಡೆಗಣಿಸಿ ಅನರ್ಹ ಸದಸ್ಯರಿಗೆ ದಿನಾಂಕ: 27.10.1994ರಲ್ಲಿ ನಿಯಮಬಾಹಿರವಾಗಿ ನೋಂದಣಿ ಮಾಡಿಕೊಟ್ಟಿರುತ್ತಾರೆ. ಈ ಜಮೀನಿನ ಬಗ್ಗೆ ಸಿವಿಲ್ ನ್ಯಾಯಾಲಯದಲ್ಲಿ ದಾವೆ ಸಂಖ್ಯೆ: 5767/ 94 ನಡೆಯುತ್ತಿದ್ದು, ದಿನಾಂಕ:17.10.94 ಕಾಂಪ್ರಮೈಸ್ ಡಿಕ್ರಿ ಸಂಘದ ಪರವಾಗಿ ಆದೇಶ ಪಡೆದ ನಂತರ ಸಂಘಕ್ಕೆ ಅವಾರ್ಡ್ ಪಡೆದು ಸಂಘದ ಹೆಸರಿಗೆ ನೊಂದಣಿ ಮಾಡಿಸಿಕೊಂಡು ಸಕ್ರಮ ಬಡಾವಣೆ ರಚಿಸಿ ನಿವೇಶನಗಳನ್ನು ನೊಂದಣಿ ಮಾಡಲು ವಿಫಲರಾಗಿದ್ದರಿಂದ ಮತ್ತು ಹಿರಿಯ ಸದಸ್ಯರನ್ನು ಕಡೆಗಣಿಸಿ ಅನರ್ಹ ಸದಸ್ಯರಿಗೆ ಒಂದು ಗುಂಪಿನ ಆಡಳಿತ ಮಂಡಳಿಯವರು ನಿವೇಶನಗಳನ್ನು ನೋಂದಣಿ ಮಾಡಿಕೊಟ್ಟಿರುವ ಬಗ್ಗೆ ಸಿವಿಲ್ ನ್ಯಾಯಾಲಯಗಳಲ್ಲಿ ಓ.ಎಸ್. ನಂ.2398/99 ರಂತೆ ಆಡಳಿತಾಧಿಕಾರಿಗಳು ವ್ಯಾಜ್ಯ ಹೂಡಿರುತ್ತಾರೆ ಮತ್ತು ಇನ್‌ಜೆಂಕ್ಷನ್ ಪಡೆದುಕೊಂಡಿರುತ್ತಾರೆ. ಆದರೆ ದಿನಾಂಕ:04.07.2000ರಲ್ಲಿ ಇನ್‌ಜೆಂಕ್ಷನ್ ವಜಾ ಮಾಡಿ ಕಲಂ 70 ರಡಿಯಲ್ಲಿ ದಾವೆ ಹೂಡಲು ಆದೇಶ ಆಗಿದ್ದರ ಹಿನ್ನೆಲೆಯಲ್ಲಿ ಆಡಳಿತಾಧಿಕಾರಿಗಳು ಕಲಂ 70 ರಡಿಯಲ್ಲಿ ಎಆರ್‌ಬಿ-44/ ಎಬಿಎನ್/ 6/ 2000-01ರ ರೀತ್ಯಾ ದಾವೆ ಹೂಡಿದ್ದು ಇತ್ಯರ್ಥವಾಗಲು ಬಾಕಿ ಉಳಿದಿರುತ್ತದೆ. ಈ ವ್ಯಾಜ್ಯದ ಬಗ್ಗೆ ಗೌರವ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳು ದಾಖಲಾಗಿರುತ್ತದೆ. ಹೀಗಾಗಿ ವ್ಯಾಜ್ಯದ ಪ್ರಕರಣವು ಇತ್ಯರ್ಥವಾಗಲು ಬಾಕಿ ಉಳಿದುಕೊಂಡಿರುವುದು ಕಂಡುಬರುತ್ತದೆ. ಈ ಮಧ್ಯೆ ಜಮೀನಿನ ಮಾಲೀಕರ ಸಂಬಂಧಿಕರೆಂದು ಹೇಳಿಕೊಂಡು ಸರ್ವೆ ನಂ.60/1 ಮತ್ತು 61/1 ರ ಜಮೀನನ್ನು ಜೈಪದ್ಮಾ ಡೆವಲಪರ್ಸ್‌ರವರಿಗೆ 2005ರಲ್ಲಿ ಕರಾರು ಮಾಡಿ ಮಾರಾಟ ಮಾಡಿರುವುದು ಕಂಡುಬಂದಿರುತ್ತದೆ. ಸದರಿ ಜೈ ಪದ್ಮಾ ಡೆವಲಪರ್ಸ್‌ರವರು ಸಂಘವನ್ನು ಪಾರ್ಟಿ ಮಾಡದೆ ಗುಪ್ತವಾಗಿ ಜಮೀನು ಮಾಲೀಕರ ಸಂಬಂಧಿಕರೊಂದಿಗೆ ಅವ್ಯವಹಾರ ಮಾಡಿ ಅಕ್ರಮವಾಗಿ ಖರೀದಿಸಿರುವುದರ ಜೊತೆಗೆ ಓ.ಎಸ್. ನಂ.1960/ 2005ರ ಪ್ರಕಾರವಾಗಿ ಸಿವಿಲ್ ನ್ಯಾಯಾಲಯದಲ್ಲಿ ವ್ಯಾಜ್ಯ ಹೂಡಿದ್ದು, ಇನ್‌ಜೆಂಕ್ಷನ್ ಹಾಗೂ ಪೊಲೀಸ್ ರಕ್ಷಣೆ ಪಡೆದು ಬಡಾವಣೆಯಲ್ಲಿ ಅಕ್ರಮಿಸಿಕೊಳ್ಳಲು ಸಂಚು ನಡೆಸಿದ್ದನ್ನು ವಿಫಲಗೊಳಿಸಲು ಹಿಂದಿನ ಆಡಳಿತಾಧಿಕಾರಿಗಳು ಉದ್ದೇಶಿತ ಪ್ರತಿವಾದಿಗಳಾಗಿ ಮಧ್ಯ ಪ್ರವೇಶಿಸಿರುತ್ತಾರೆ. ಉದ್ದೇಶಿತ ಪ್ರತಿವಾದಿಯಾಗಿ ಸೇರ್ಪಡೆಯಾದ ಅರ್ಜಿಗೆ ಮನ್ನಣೆ ನೀಡಿರುವುದರ ಜೊತೆಗೆ ಪೊಲೀಸ್ ರಕ್ಷಣೆ ವಜಾ ಮಾಡಿ ಆಡಳಿತಾಧಿಕಾರಿಗಳಿಗೆ ಮುಕ್ತ ಅವಕಾಶ ನೀಡಿ ಸಂಘದ ಪರವಾಗಿ ದಿನಾಂಕ:21.04.2006ರಲ್ಲಿ ಆದೇಶ ಆಗಿರುತ್ತದೆ. ವ್ಯಾಜ್ಯ ಸಂಪೂರ್ಣವಾಗಿ ಇತ್ಯರ್ಥವಾಗಲು ಪ್ರಕರಣ ಮುಂದುವರಿದಿರುತ್ತದೆ. ಹೀಗೆ ಹಾಲಿ ಬಡಾವಣೆ ಸಂಬಂಧದ ಜಮೀನಿನ ಮೇಲೆಯೇ ವ್ಯಾಜ್ಯಗಳೂ ಮುಂದುವರಿಯುತ್ತಿದ್ದು, ಅತ್ಯಂತ ಸಮಸ್ಯೆಯಿಂದ ಕೂಡಿರುತ್ತದೆ.

11. ಇದೇ ರೀತಿಯಾಗಿ ಸರ್ವೆ ನಂ.69/2 ರ ಬಗ್ಗೆ ಸಹ ಸಂಘದ ಭೂ ಮಾಲೀಕರಾದ ಶ್ರೀ ಎ. ಕೃಷ್ಣಪ್ಪ ಇವರೊಡನೆ ವಿವಿಧ ನ್ಯಾಯಾಲಯಗಳಲ್ಲಿ ವ್ಯಾಜ್ಯಗಳು ನಡೆದಿರುತ್ತದೆ. ಹಾಲಿ ಓ.ಎಸ್. ನಂ4354/99 ರಂತೆ ಸಿವಿಲ್ ನ್ಯಾಯಾಲಯದಲ್ಲಿ ನಡೆಯುತ್ತಿದ್ದು ಇತ್ಯರ್ಥಕ್ಕೆ ಬಾಕಿ ಇರುತ್ತದೆ. ಈ ಜಮೀನಿನ ಸಂಬಂಧವಾಗಿ ನಗರಾಭಿವೃದ್ಧಿ ಇಲಾಖೆಯವರು ದಿನಾಂಕ:21.08.1998 ರಲ್ಲಿ ಭೂ ಮಾಲೀಕರ ಪರವಾಗಿ 'ಡಿ' ನೋಟಿಫಿಕೇಷನ್ ಆಗಿದ್ದನ್ನು ಸಂಘದ ಆಡಳಿತಾಧಿಕಾರಿಗಳು ಮತ್ತು ಬಿ.ಡಿ.ಎ. ಆಯುಕ್ತರ ಮನವಿಯನ್ನು ಆಧರಿಸಿ ಈ 'ಡಿ' ನೋಟಿಫಿಕೇಷನ್ ಆದೇಶವನ್ನು ದಿನಾಂಕ:03.04.2006ರಲ್ಲಿ ಸರ್ಕಾರವು ಬಿ.ಡಿ.ಎ ಪರವಾಗಿ ವಾಪಸ್ಸು ಪಡೆದಿರುವ ಆದೇಶವನ್ನು ಪ್ರಶ್ನಿಸಿ ಈ ಜಮೀನನ್ನು ನಿಯಮಬಾಹಿರವಾಗಿ ಖರೀದಿಸಿರುವ ಶ್ರೀ ಎ. ಕೃಷ್ಣಪ್ಪ ಇವರು ಗೌರವ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿ ತಡೆಯಾಜ್ಞೆಯನ್ನು ಪಡೆದುಕೊಂಡಿರುವುದು ತಿಳಿದುಬಂದಿರುತ್ತದೆ. ಸಂಘವು ಖರೀದಿಸಲು ಭೂ ಮಾಲೀಕರೊಂದಿಗೆ ಕರಾರು ಮಾಡಿಕೊಂಡಿರುವುದರಿಂದ ಜಮೀನಿನ ಮೇಲೆ ಹಕ್ಕು ಇರುವುದರ ಬಗ್ಗೆ ಪ್ರತಿಪಾದಿಸಿ ಸರ್ಕಾರದಿಂದ ಬಿ.ಡಿ.ಎ. ಯಿಂದ ಜಮೀನು ಪಡೆಯಲು ಪ್ರಯತ್ನಿಸಬೇಕಾಗಿರುತ್ತದೆ. ಆದರೆ ಸದರಿ ಜಮೀನಿನ ಮೇಲೆ ಸಂಘಕ್ಕೆ ಸಂಪೂರ್ಣವಾಗಿ ಒಡೆತನದ ಹಕ್ಕು ಸದ್ಯಕ್ಕೆ ಕಂದಾಯ ಇಲಾಖೆಯ ದಾಖಲಾತಿಗಳು ಮೂಲಕ ಕಂಡುಬರುತ್ತಿಲ್ಲ. ಹಿಂದಿನ ಸಂಘದ ಪತ್ರ ವ್ಯವಹಾರದ ಆಧಾರದ ಮೇಲೆ ಹಾಗೂ ಸಿವಿಲ್ ನ್ಯಾಯಾಲಯದಲ್ಲಿರುವ ವ್ಯಾಜ್ಯದ ಇತ್ಯರ್ಥದ ಆಧಾರದ ಮೇಲೆ ಹಾಗೂ ಬಿ.ಡಿ.ಎ. ರವರು ಸಂಘದ ಮನವಿಯನ್ನು ಪರಿಗಣಿಸಿ ಬಲ್ಕ್ ಅಲಾಟ್‌ಮೆಂಟ್ ಮೂಲಕ ಜಮೀನು ಮಂಜೂರು ಮಾಡಲು ಕೈಗೊಳ್ಳುವ ತೀರ್ಮಾನವನ್ನು ಅವಲಂಭಿಸಿ ಜಮೀನು ಸಂಘಕ್ಕೆ ಪಡೆಯುವಂತಾಗುತ್ತದೆ. ಹಾಲಿ ವ್ಯಾಜ್ಯಗಳು ತಕರಾರುಗಳನ್ನು ಪರಿಶೀಲಿಸಿದಾಗ ಸಧ್ಯಕ್ಕೆ ಜಮೀನು ಸಂಘಕ್ಕೆ ಜಾಗ್ರತೆ ಲಭಿಸುವ ಸಾಧ್ಯತೆಗಳು ಕಂಡುಬರುತ್ತಿಲ್ಲ.

12. ಆಡಳಿತ ಮಂಡಳಿಯ ಚುನಾವಣೆಯನ್ನು ನಡೆಸಲು ಮೂರು ಗುಂಪಿನವರು ಹಾಗೂ ಹಿಂದಿನ ಆಡಳಿತಾಧಿಕಾರಿಗಳು ಸೇರಿಕೊಂಡು (ಶ್ರೀ ಚಿಕ್ಕಪುಟ್ಟಯ್ಯ- ಶ್ರೀ ಲಕ್ಕಪ್ಪ ಈ ಗುಂಪಿನಿಂದ 1979ರಲ್ಲಿ ಪಡೆದುಕೊಂಡಿದ್ದ ಕೆಲವೊಂದು ದಾಖಲಾತಿಗಳು) ಸಂಪೂರ್ಣವಾಗಿ ದಾಖಲಾತಿಗಳನ್ನು ನೀಡಲು ವಿಫಲರಾಗಿರುತ್ತಾರೆ. ಸಂಘದ ಪ್ರಾರಂಭದಿಂದ ಮೂಲ ದಾಖಲಾತಿಗಳ ಗೈರು ಹಾಜರಿಯಲ್ಲಿ ಹಾಗೂ ದಿನಾಂಕ:27.02.1977ರ ನಂತರ ಗುಂಪು-ಗುಂಪುಗಳಾಗಿ ಆಡಳಿತ ಮಂಡಳಿಯವರು ಸಂಘದ ಕಾರ್ಯಚಟುವಟಿಕೆಗಳನ್ನು ನಡೆಸಿದ ಎಲ್ಲಾ ದಾಖಲಾತಿಗಳು ಎಲ್ಲಾ ಗುಂಪಿನವರು ಇದುವರೆವಿಗೂ ನೀಡಲು ವಿಫಲರಾಗಿದ್ದರಿಂದ ಕಲಂ 109ರ ಪ್ರಕಾರ ಕ್ರಮವಿಡಲು ನಡವಳಿಕೆ ಮುಂದುವರಿದಿರುತ್ತದೆ ಮತ್ತು ಈ ಹಿಂದೆ 2000-01 ರಿಂದ 2004-05ನೇ ಸಾಲುಗಳಿಗಾಗಿ ಲಭ್ಯವಾದ ದಾಖಲಾತಿಗಳ ಆಧಾರದ ಮೇಲೆ ನಡೆಸಿದ್ದರ ಚುನಾವಣೆ ಸಂಬಂಧವಾಗಿ ಗೌರವ ಉಚ್ಚ ನ್ಯಾಯಾಲಯದ ಆದೇಶದಂತೆ ಅಭ್ಯರ್ಥಿಗಳು ಸದಸ್ಯತ್ವದ ಬಗ್ಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ರವರ ನ್ಯಾಯಾಲಯದಲ್ಲಿ ವ್ಯಾಜ್ಯ ಸಂಖ್ಯೆ: ಎಆರ್‌ಬಿ-1/ ಎಬಿಎನ್/ 35/ 2004-05 ಇತ್ಯರ್ಥಕ್ಕೆ ಬಾಕಿಯಿರುತ್ತದೆ. ಹಾಗೂ ಒಗ್ಗೂಡಿಸಿದ ದಾಖಲಾತಿಗಳು ರಚಿಸಲು ಸಾಧ್ಯವಾಗದೇ ಇರುವುದರಿಂದ 31 ವರ್ಷಗಳ ಆಡಿಟ್ ಮಾಡಿಸಲು

ಸಾಧ್ಯವಾಗಿರುವುದಿಲ್ಲ. ಹಾಗೂ ಹಲವಾರು ವ್ಯಾಜ್ಯಗಳು ಇಲಾಖಾಧಿಕಾರಿಗಳಲ್ಲಿ, ಕೆ.ಎ.ಟಿ.ಯಲ್ಲಿ ಸಿವಿಲ್ ನ್ಯಾಯಾಲಯಗಳಲ್ಲಿ ಮತ್ತು ಗೌರವ ಉಚ್ಚ ನ್ಯಾಯಾಲಯಗಳಲ್ಲಿ ವ್ಯಾಜ್ಯಗಳು ನಡೆಯುತ್ತಿರುವುದರಿಂದ ಅತ್ಯಂತ ಸಮಸ್ಯೆಯಿಂದಲೂ ಹಾಗೂ ಜಟಿಲವಾಗಿರುತ್ತದೆ. ಹೀಗಾಗಿ ಚುನಾವಣೆಯನ್ನು ನಡೆಸಲು ಸಾಧ್ಯತೆಗಳು ಕಂಡುಬರುತ್ತಿಲ್ಲ.

13. ಆಡಳಿತ ಮಂಡಳಿಗೆ ಚುನಾವಣೆಯನ್ನು ನಡೆಸಲು ಸಂಘದಲ್ಲಿ ಹಣಕಾಸು ಇರುವುದಿಲ್ಲ. ಸಂಘದ ಆರ್ಥಿಕ ಪರಿಸ್ಥಿತಿಯು ದುರ್ಬಲವಾಗಿದ್ದು ಹೀನಾಯ ಸ್ಥಿತಿಯಲ್ಲಿರುತ್ತದೆ.

14. ಸಂಘವನ್ನು ಯಾವ ಉದ್ದೇಶಕ್ಕಾಗಿ ಸ್ಥಾಪನೆ ಮಾಡಲಾಗಿದೆಯೋ ಆ ಉದ್ದೇಶವನ್ನು ಈಡೇರಿಸಲು ಸಂಪೂರ್ಣವಾಗಿ ವಿಫಲಗೊಂಡಿರುತ್ತದೆ.

15. ಈ ಹಿಂದೆ ಚುನಾವಣೆಗಾಗಿ ತಯಾರಿಸಿರುವ ಸದಸ್ಯತ್ವದ ಪಟ್ಟಿಯನ್ನು ಪರಿಶೀಲಿಸಲಾಗಿ ಬಹಳಷ್ಟು ಜನರು ಸಂಘದ ಕಾರ್ಯವ್ಯಾಪ್ತಿಯ ಹೊರಗಡೆಯವರಾಗಿರುತ್ತಾರೆ. ಈ ಸದಸ್ಯತ್ವಕ್ಕೆ ಪೂರಕವಾಗಿ ನಿರೂಪಿಸುವಂತಹ ದಾಖಲಾತಿಗಳ ಗೈರುಹಾಜರಿಯಲ್ಲಿ ಸದಸ್ಯತ್ವದ ಬಗ್ಗೆ, ಸದಸ್ಯರ ಜೇಷ್ಠತೆಯ ಬಗ್ಗೆ- ಹಿರಿಯ ಸದಸ್ಯರ ಬಗ್ಗೆ ನಿಖರವಾಗಿ ಹೇಳಲು ಬರುವುದಿಲ್ಲ ಹೀಗಾಗಿ ಎಲ್ಲಾ ಸದಸ್ಯರು ಸದ್ಯಕ್ಕೆ ಮೇಲ್ನೋಟಕ್ಕೆ ನಗದು ಪುಸ್ತಕ, ರಸೀತಿ ಪುಸ್ತಕ, ಷೇರು ಖಾತೆಗಳು, ಷೇರು ಪತ್ರಗಳು, ಸದಸ್ಯತ್ವದ ಅರ್ಜಿಗಳು ಆಡಳಿತ ಮಂಡಳಿ ಠರಾವುಗಳು ಲಭ್ಯವಿರುವುದಿಲ್ಲ. ಸದಸ್ಯತ್ವವು ಅನರ್ಹತೆಯಿಂದ ಕೂಡಿರುವುದು ಕಂಡುಬಂದಿದ್ದು. ನೈಜ್ಯತೆಯಿಂದ ಈ ಪಟ್ಟಿ ಕೂಡಿರುವುದು ಕಂಡುಬಂದಿರುವುದಿಲ್ಲ. ಹೀಗಾಗಿ ದಾಖಲಾತಿಗಳ ಗೈರುಹಾಜರಿಯಲ್ಲಿ ನಿಯಮಾನುಸಾರ ಪಾರದರ್ಶಕವಾಗಿ ಆಡಳಿತ ಮಂಡಳಿಗೆ ಚುನಾವಣೆಯನ್ನು ನಡೆಸಲು ಸಾಧ್ಯತೆಗಳು ಇರುವುದಿಲ್ಲ.

16. ಜಮೀನು ಬಗ್ಗೆ, ಬಡಾವಣೆ ಬಗ್ಗೆ, ನಿವೇಶನಗಳ ಬಗ್ಗೆ ಆಡಳಿತ ಮಂಡಳಿಯ ಬಗ್ಗೆ ಹಲವಾರು ವ್ಯಾಜ್ಯಗಳು, ತಕರಾರುಗಳು ನಿಯಮಬಾಹಿರ ಅವ್ಯವಹಾರಗಳು ನಡೆಯುತ್ತಿದ್ದು, ಈಗಲೂ ಹಿಂದಿನ ಆಡಳಿತ ಮಂಡಳಿಯವರು ದಾಖಲಾತಿಗಳನ್ನು ನೀಡದೆ ಇದ್ದು, ಈಗಲೂ ತಾವೇ ವಾರಸುದಾರರು ಎಂದು ಹೇಳಿಕೊಂಡು ವ್ಯವಹಾರ ಮಾಡುತ್ತಿರುವುದು ಹಾಗೂ ಜಮೀನುದಾರರುಗಳು, ಇತರೇ ಪಟ್ಟಭದ್ರ ಹಿತಾಸಕ್ತಿಗಳು ಅಮಾಯಕ ಸಾರ್ವಜನಿಕರಿಂದ ಅಥವಾ ಸದಸ್ಯರಿಂದ ನಿವೇಶನ ಕೊಡಿಸುವುದಾಗಿ ಅಥವಾ ಜಮೀನು ಮಾರಾಟ ಮಾಡುವ ಆಮಿಷವನ್ನು ಒಡ್ಡಿ ಹಣ ವಸೂಲಿ ಮಾಡಿ ಮೋಸಪಡಿಸುವಂತಹ ಪ್ರಕರಣಗಳು ಉದ್ಭವಿಸುವ ಸಾಧ್ಯತೆಗಳು ಕಂಡುಬರುತ್ತದೆ. ಸದರಿ ಬಡಾವಣೆಯ ಜಮೀನು ಬೆಲೆ ಬಾಳುವಂತಹ ಬಸವೇಶ್ವರನಗರದಲ್ಲಿರುವುದರಿಂದ ರೌಡಿಸಂ, ಲ್ಯಾಂಡ್ ಮಾಫಿಯಾ, ಲ್ಯಾಂಡ್ ಗ್ರಾಂಬರ್ಸ್, ಪಟ್ಟಭದ್ರಾ ಹಿತಾಸಕ್ತಿಗಳ ವಶ ಸೇರುವ ಬದಲು ಈಗಾಗಲೇ ಆಡಳಿತಾಧಿಕಾರಿಗಳು, ಉಪನಿಬಂಧಕರು-1 ಹಾಗೂ ಕಲಂ 65ರ ವಿಚಾರಣಾ ವರದಿಯಲ್ಲಿ ತಿಳಿಸಿರುವಂತೆ ಸದರಿ ಈ ಜಮೀನನ್ನು ಸರ್ಕಾರವೇ ವಹಿಸಿಕೊಂಡು ಸಾರ್ವಜನಿಕರ ಉಪಯೋಗಕ್ಕಾಗಿ ಉಪಯೋಗಿಸುವಂತಹ ಕ್ರಮದಿಂದ ಇಂತಹ ಸಮಸ್ಯೆಯಿಂದ ತಂಟೆ-ತಕರಾರುಗಳಿಂದ, ವ್ಯಾಜ್ಯಗಳಿಂದ, ಅನಿಶ್ಚಿತ ಗೊಂದಲಮಯ ವಾತಾವರಣದಿಂದ ತಪ್ಪಿಸಲು ಸಾಧ್ಯತೆಗಳು ಕಂಡುಬರುತ್ತಿದೆ.

17. ಸಂಘದ ಜಮೀನು ಬಗ್ಗೆ, ಬಡಾವಣೆಗಳ ಬಗ್ಗೆ, ನಿವೇಶನಗಳ ಬಗ್ಗೆ ಆಡಳಿತ ಮಂಡಳಿಯ ಬಗ್ಗೆ ಹಲವಾರು ವ್ಯಾಜ್ಯಗಳು, ತಂಟೆ-ತಕರಾರುಗಳು, ನಿಯಮಬಾಹಿರ ವ್ಯವಹಾರಗಳು ನಡೆಯುತ್ತಿದ್ದು, ಹಿಂದಿನ ಆಡಳಿತ ಮಂಡಳಿಯವರು ದಾಖಲಾತಿಗಳನ್ನು ನೀಡದೇ ಈಗಲೂ ಸಹ ವಾರಸುದಾರರೆಂದು ಹೇಳಿಕೊಂಡು ವ್ಯವಹಾರ ಮಾಡುತ್ತಿರುವುದು ಹಾಗೂ ಜಮೀನುದಾರರುಗಳು ಇತರೆ ಪಟ್ಟಭದ್ರ ಹಿತಾಸಕ್ತಿಗಳು ಅಮಾಯಕ ಸಾರ್ವಜನಿಕರಿಂದ/ ಸದಸ್ಯರುಗಳಿಂದ ನಿವೇಶನ ಕೊಡಿಸುವುದಾಗಿ ಅಥವಾ ಜಮೀನು ಮಾರಾಟ ಮಾಡುವ ಆಮಿಷವನ್ನು ಒಡ್ಡಿ ಹಣ ವಸೂಲಿ ಮಾಡಿ ಮೋಸಪಡಿಸುವಂತಹ ಪ್ರಕರಣಗಳು ಉದ್ಭವಿಸುವ ಸಾಧ್ಯತೆಗಳು ಕಂಡುಬರುತ್ತದೆಂದು ಮತ್ತು ಸದರಿ ಬಡಾವಣೆಯ ಜಮೀನು, ಬೆಲೆ ಬಾಳುವಂತಹ ಬಸವೇಶ್ವರ ನಗರದಲ್ಲಿರುವ ರೌಡಿಸಂ, ಲ್ಯಾಂಡ್ ಗ್ರಾಂಬರ್ಸ್, ಪಟ್ಟಭದ್ರಾ ಹಿತಾಸಕ್ತಿಗಳ ವಶ ಸೇರುವ ಬದಲು ಈಗಾಗಲೇ ಆಡಳಿತಾಧಿಕಾರಿಗಳು, ಉಪನಿಬಂಧಕರು-1, ಹಾಗೂ ಕಲಂ 65ರ ವಿಚಾರಣಾ ವರದಿಯಲ್ಲಿ ತಿಳಿಸಿರುವಂತೆ ಸರ್ಕಾರವೇ ವಹಿಸಿಕೊಂಡು ಸಾರ್ವಜನಿಕರ ಉಪಯೋಗಕ್ಕಾಗಿ ಉಪಯೋಗಿಸುವಂತಹ ಕ್ರಮದಿಂದ ಇಂತಹ ಸಮಸ್ಯೆಯಿಂದ ತಂಟೆ-ತಕರಾರುಗಳು, ವ್ಯಾಜ್ಯಗಳಿಂದ ಅನಿಶ್ಚಿತ ಗೊಂದಲಮಯ ವಾತಾವರಣದಿಂದ ತಪ್ಪಿಸಲು ಸಾಧ್ಯತೆಗಳು ಕಂಡುಬರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಅವಲೋಕಿಸಿದಾಗ ಸಂಘವನ್ನು ಪುನಃಶ್ಚೇತನಗೊಳಿಸಿ ಕಾರ್ಯನಿರ್ವಹಿಸಲು ಯಾವುದೇ ರೀತಿಯ ರಹವಿಲ್ಲದ ಕಾರಣ ಮತ್ತು ಸಂಘದಲ್ಲಿ ಹಣಕಾಸಿನ ತೊಂದರೆಯಿಂದ ಆಡಳಿತ ಮಂಡಳಿ ಚುನಾವಣೆಯನ್ನು ನಡೆಸಲು ಸಾಧ್ಯವಾಗದೇ ಅನೇಕ ವರ್ಷಗಳಿಂದ ಹಾಗೆಯೇ ಮುಂದುವರಿದಿದ್ದು, ಸಂಘದ ಆಡಳಿತ ಮಂಡಳಿಯಲ್ಲಿ ಗುಂಪುಗಾರಿಕೆ, ತಂಟೆ-ತಕರಾರು, ನ್ಯಾಯಾಲಯಗಳಲ್ಲಿ ವ್ಯಾಜ್ಯಗಳು ಇತ್ಯಾದಿ ಕಾರಣಗಳಿಂದಾಗಿ ಸಂಘವು ಯಾವುದೇ ಕಾರ್ಯವನ್ನು ನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಸದರಿ ಸಂಘವನ್ನು ಸಹಕಾರ ಸಂಘಗಳ ಕಾಯ್ದೆ ಕಲಂ 72 ರನ್ವಯ ಸಮಾಪನಗೊಳಿಸಿ, ಕಲಂ 73ರನ್ವಯ ಸಮಾಪನಾಧಿಕಾರಿಯನ್ನು ನೇಮಕ ಮಾಡುವುದು ಸೂಕ್ತವೆಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯರವರು ಅಭಿಪ್ರಾಯಪಟ್ಟಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು ಒಂದನೇ ವಲಯ ಇವರ ಪ್ರಸ್ತಾವೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ಮೇಲ್ಕಂಡ ಸಹಕಾರ ಸಂಘದ ಹಿಂದಿನ ಆಡಳಿತ ಮಂಡಳಿಯ ಸದಸ್ಯರುಗಳಲ್ಲಿ ಮೂರು ಗುಂಪುಗಳಾಗಿದ್ದು, ಸಂಘದ ಅತೀ ಮುಖ್ಯವಾದ ದಾಖಲಾತಿಗಳನ್ನು ಈ ಗುಂಪುಗಳು ಸಂಘದ ಆಡಳಿತಾಧಿಕಾರಿಗಳ ವಶಕ್ಕೆ ವಹಿಸಿಕೊಡದೇ ಉದ್ದೇಶಪೂರ್ವಕವಾಗಿ ಸಂಘದ ಆಡಳಿತ ಮಂಡಳಿ ಚುನಾವಣೆಯನ್ನು ನಡೆಸಲು ಅನುಕೂಲವಾಗುವಂತೆ ಸಂಘದ ಅರ್ಹ ಸದಸ್ಯರ ಪಟ್ಟಿಯನ್ನು ತಯಾರಿಸಲು ಆಡಳಿತಾಧಿಕಾರಿಯವರಿಗೆ ಈವರೆಗೆ ಸಾಧ್ಯವಾಗದೇ ಇರುವ ಪರಿಸ್ಥಿತಿ ನಿರ್ಮಾಣವಾಗಲು ಕಾರಣವಾಗಿದೆ. ಸಂಘವು ಸುಮಾರು 25 ವರ್ಷಗಳ ಹಿಂದೆ ಬಸವೇಶ್ವರ ನಗರದಲ್ಲಿ ನಿರ್ಮಿಸಿರುವ ಬಡಾವಣೆಯಲ್ಲಿ ಕಾನೂನುಬಾಹಿರವಾಗಿ ಸಂಘದ ಹಿಂದಿನ ಆಡಳಿತ ಮಂಡಳಿಯವರು ಅರ್ಹ ಸದಸ್ಯರಿಗೆ ನಿವೇಶನ ಹಂಚಿಕೆ ಮಾಡದೇ ಇರುವುದರಿಂದ ಸದರಿ ಬಡಾವಣೆಯಲ್ಲಿ ರಚಿಸಲಾಗಿರುವ ಎಲ್ಲಾ ನಿವೇಶನಗಳ ಬಗ್ಗೆ ನ್ಯಾಯಾಲಯಗಳಲ್ಲಿ ವ್ಯಾಜ್ಯಗಳು ಅನೇಕ ವರ್ಷಗಳಿಂದ ಇತ್ಯರ್ಥವಾಗದೇ ಮುಂದುವರಿಯಲು ಕಾರಣವಾಗಿದೆ. ಸಂಘವು ಸ್ಥಾಪನೆಯಾಗಿ ಸುಮಾರು 30 ವರ್ಷಗಳಾಗಿದ್ದರೂ ಸಂಘವು ಸಮರ್ಪಕವಾಗಿ ಕಾರ್ಯ ನಿರ್ವಹಿಸದೇ ಸ್ಥಗಿತಗೊಂಡಿರುವುದು ಕಂಡುಬಂದಿದ್ದು, ಈ ಸಂಘವು ನೋಂದಣಿಯಾದ ಉದ್ದೇಶವನ್ನು ಈಡೇರಿಸಲು ವಿಫಲವಾಗಿದ್ದು, ಇದನ್ನು ಹೀಗೆಯೇ ಮುಂದುವರಿಸಿದಲ್ಲಿ ಈ ಸಂಘದಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ರೀತಿಯ ಉಪಯೋಗವಾಗಲಾರದು ಎಂಬುದು ಕಂಡುಬರುತ್ತದೆ. ಸರ್ಕಾರವು ಉಲ್ಲೇಖ (1)ರಲ್ಲಿ ಕಾಣಿಸಿರುವ ತನ್ನ ದಿನಾಂಕ:23.06.2006ರ ಪತ್ರದಲ್ಲಿ ಸಂಘದ ಆಡಳಿತ ಮಂಡಳಿಯ ಚುನಾವಣೆ

ನಡೆಸಲು ದಿನಾಂಕ:31.12.2006ರ ವರೆಗೆ ಗಡುವು ನೀಡಿದ್ದು, ಸಂಘದಲ್ಲಿ ಮುಖ್ಯವಾದ ದಾಖಲಾತಿಗಳು ಲಭ್ಯವಿಲ್ಲದಿರುವುದರಿಂದ ಸಂಘದ ಹಿಂದಿನ ಹಾಗೂ ಈಗಿನ ಆಡಳಿತಾಧಿಕಾರಿಗಳು ಅರ್ಹ ಸದಸ್ಯರ ಪಟ್ಟಿಯನ್ನು ತಯಾರಿಸುವ ಬಗ್ಗೆ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಣೆ ನೀಡುವುದು ಹಾಗೂ ಸಹಾಯಕ ನಿಬಂಧಕರು ಕಲಂ 109ರ ರೀತ್ಯಾ ಸಂಬಂಧಪಟ್ಟವರ ವಿರುದ್ದ ನೋಟೀಸು ಜಾರಿಮಾಡಿರುವ ಕ್ರಮವನ್ನು ಕೈಗೊಂಡಿದ್ದಾಗ್ಯೂ ಈ ಬಗ್ಗೆ ಯಾವುದೇ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗದ ಪರಿಸ್ಥಿತಿ ನಿರ್ಮಾಣವಾಗಿರುತ್ತದೆ. ಮೇಲಿನ ಎಲ್ಲಾ ಅಂಶಗಳನ್ನು ಅವಲೋಕಿಸಿದಾಗ ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರಲ್ಲಿ ತಿಳಿಸಿರುವಂತೆ ನೋಂದಣಿಯಾದ ಉದ್ದೇಶವನ್ನು ಈಡೇರಿಸಲು ವಿಫಲವಾದ ಹಿನ್ನೆಲೆಯಲ್ಲಿ ಈ ಸಂಘವನ್ನು ಮುಂದುವರಿಸುವ ಬದಲು ಇದನ್ನು ಸಮಾಪನೆಗೊಳಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವುದು ಸೂಕ್ತವೆಂದು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2) ಮತ್ತು ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯೂ/ 69/ ಸಿಎಲ್ಎಂ/ 2001 ದಿನಾಂಕ:21.11.2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಟಿ.ವಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಕರ್ನಾಟಕ ಅರ್ಬನ್ ಹೌಸಿಂಗ್ ಕೋ-ಆಪರೇಟಿವ್ ಸೊಸೈಟಿ ನಿಯಮಿತ ಬಸವೇಶ್ವರ ನಗರ, ಬೆಂಗಳೂರು-79 ಈ ಸಹಕಾರ ಸಂಘವನ್ನು ಕೂಡಲೇ ಜಾರಿಗೆ ಬರುವಂತೆ ಸಮಾಪನೆಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ಹಾಗೂ ಸಹಕಾರ ಸಂಘಗಳ ಕಾಯಿದೆಯ ಕಲಂ 73ರನ್ವಯ ಶ್ರೀ ಸಿದ್ದಗಂಗಪ್ಪ, ಅಧೀಕ್ಷಕರು, ಸಹಕಾರ ಸಂಘಗಳ ಉಪನಿಬಂಧಕರು-1ರವರ ಕಛೇರಿ, ಬೆಂಗಳೂರು ನಗರ ಜಿಲ್ಲೆ, ಇವರನ್ನು ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಈ ಮೂಲಕ ಆದೇಶಿಸಿರುತ್ತೇನೆ. ಸಮಾಪನಾಧಿಕಾರಿಯವರು ಮೇಲ್ಕಂಡ ಸಹಕಾರ ಸಂಘದ ಪ್ರಭಾರವನ್ನು ಕೂಡಲೇ ವಹಿಸಿಕೊಂಡು, ಸಂಘದ ಸಮಾಪನಾ ಕಾರ್ಯವನ್ನು ತೀವ್ರಗತಿಯಲ್ಲಿ ಮುಗಿಸಿ, ಸಂಘದ ನೋಂದಣಿಯನ್ನು ರದ್ದುಪಡಿಸಲು ಆದಷ್ಟು ಬೇಗ ಪ್ರಸ್ತಾವೆಯನ್ನು ಈ ಕಛೇರಿಗೆ ಸಲ್ಲಿಸುವಂತೆ ಈ ಮೂಲಕ ಆದೇಶಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:28.12.2006ರಂದು ನೀಡಿರುತ್ತೇನೆ.

**ಟಿ.ವಿ. ನರಸಿಂಹಮೂರ್ತಿ**

ಪಿ.ಆರ್.98

ಸಹಕಾರ ಸಂಘಗಳ ಉಪನಿಬಂಧಕರು-1,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ ಹಾಗೂ ವಸೂಲಾಧಿಕಾರಿಯವರು, ನಂ.146, 3ನೇ ಮುಖ್ಯರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-560 003

## ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101(ಬಿ) ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ (8) (ಬಿ) ಮೇರೆಗೆ ನೀಡಲಾದ ಮಾರಾಟ ಮಾಡಲಾಗದ ಆಸ್ತಿಯ ವರ್ಗಾವಣೆ ಪ್ರಮಾಣ ಪತ್ರ

1) ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ರವರ ಅಧಿಬಾರ ಅರ್ಜಿಯ ಸಂಖ್ಯೆ: ಡಿಆರ್‌ಬಿ-1/ ಎಸ್‌ಸಿ/ 01/ 2001-02 ದಿನಾಂಕ: 27.05.2002.
2) ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ರವರ ನ್ಯಾಯಾಲಯದ ತಿದ್ದುಪಡಿ ಆದೇಶದ ಅಧಿಬಾರ ಅರ್ಜಿ ಸಂಖ್ಯೆ: ಡಿಆರ್‌ಬಿ-1/ ಅಧಿಬಾರ/ 1/ 2001-02 ದಿನಾಂಕ:04.12.2006 (ಸ್ವೀಕೃತಿ ದಿನಾಂಕ:03.01.2007)
3) ಈ ಕಛೇರಿ ಕಡತಕ್ಕೆ ಸಂಬಂಧಿಸಿದ ಅಮಲ್ಜಾರಿ ಅರ್ಜಿ ಸಂಖ್ಯೆ ಎಆರ್‌ಬಿ 45/ 6161/ 2004-05.

**ಡಿಕ್ರಿ ಹೋಲ್ಡರ್:** ಕಾರ್ಯದರ್ಶಿ, ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬಾಪೂಜಿನಗರ, ಬೆಂಗಳೂರು-560026 (ಸ್ವಯಂಪ್ರೇರಿತ)

**ತೀರ್ಪುಸಾಲಗಾರರು:**

1. ಶ್ರೀ ಡಿ. ರಾಜ್‌ಕುಮಾರ್,
ನಂ.100, ಆರ್.ಕೆ. ಹೌಸ್, ಸರ್ವೀಸ್ ರಸ್ತೆ, ವಿಜಯನಗರ, 2ನೇ ಹಂತ, ಬೆಂಗಳೂರು-560040.

2. ಶ್ರೀ ಎಂ.ವಿ. ರುದ್ರಾಚಾರ್ (ಮೃತರಾಗಿರುತ್ತಾರೆ) ಇವರ ವಾರಸುದಾರರು

2ಎ. ಶ್ರೀ ಬಿ.ಆರ್. ಪ್ರಕಾಶ್ ಬಿನ್ ಲೇಟ್ ಎಂ.ವಿ. ರುದ್ರಾಚಾರ್,
ನಂ.41, 1ನೇ ಮುಖ್ಯರಸ್ತೆ, 2ನೇ ಹಂತ, ಅತ್ತಿಗುಪ್ಪೆ, ವಿಜಯನಗರ, ಬೆಂಗಳೂರು-40.

2ಬಿ. ಶ್ರೀ ಬಿ.ಆರ್. ಸತೀಶ್ ಬಿನ್ ಲೇಟ್ ಎಂ.ವಿ. ರುದ್ರಾಚಾರ್,
ನಂ. 41, 1ನೇ ಮುಖ್ಯ ರಸ್ತೆ, 2ನೇ ಹಂತ, ಅತ್ತಿಗುಪ್ಪೆ, ವಿಜಯನಗರ, ಬೆಂಗಳೂರು-40.

2ಸಿ. ಶ್ರೀಮತಿ ಬಿ.ಆರ್. ಲತಾ, ಬಿನ್ ಲೇಟ್ ಎಂ.ವಿ. ರುದ್ರಾಚಾರ್,
ನಂ.134, 8ನೇ ಅಡ್ಡರಸ್ತೆ, ಬಾಪೂಜಿನಗರ, ಬೆಂಗಳೂರು-40.

3. ಶ್ರೀ ಡಿ.ಎನ್. ಹನುಮಯ್ಯ,
ನಂ.1ನೇ ಮುಖ್ಯರಸ್ತೆ, ಆರ್.ಪಿ.ಸಿ. ಬಡಾವಣೆ, ವಿಜನಗರ, ಬೆಂಗಳೂರು-560040.

4. ಶ್ರೀ ರಾಮಯ್ಯ ಪಿ.ಎಸ್.
ನಂ.20, ಸರಸ್ವತಿನಗರ, ವಿಜಯನಗರ, ಬೆಂಗಳೂರು-40.

5. ಶ್ರೀ ಪೂವಯ್ಯ,
ನಂ.11, 2ನೇ ಅಡ್ಡರಸ್ತೆ, ವಿಠಲನಗರ, ಟಿ.ಆರ್. ಮಿಲ್ ರಸ್ತೆ, ಚಾಮರಾಜಪೇಟೆ, ಬೆಂಗಳೂರು-560018.

6. ಶ್ರೀಮತಿ ಪ್ರೇಮಾಬಾಯಿ,
ನಂ.42/ಎ, 2ನೇ ಮುಖ್ಯರಸ್ತೆ, 5ನೇ ಅಡ್ಡರಸ್ತೆ, ಬಾಪೂಜಿನಗರ, ಮೈಸೂರು ರಸ್ತೆ, ಬೆಂಗಳೂರು-26.

7. ಶ್ರೀ ನಾರಾಯಣಗೌಡ,
ನಂ.616, 7ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು-40.

8. ಶ್ರೀ ಕೆ. ಚಿಕ್ಕಹೊನ್ನಪ್ಪ (ಮೃತರಾಗಿರುತ್ತಾರೆ)
ಇವರ ವಾರಸುದಾರರು

8ಎ. ಶ್ರೀಮತಿ ಸಿದ್ದಮ್ಮ, ಕೋಂ ಲೇಟ್ ಚಿಕ್ಕಹೊನ್ನಪ್ಪ

8ಬಿ. ಶ್ರೀಮತಿ ಲತಾ, ಬಿನ್ ಲೇಟ್ ಚಿಕ್ಕಹೊನ್ನಪ್ಪ

8ಸಿ. ಶ್ರೀಮತಿ ಲಕ್ಷ್ಮಿ ಬಿನ್ ಲೇಟ್ ಚಿಕ್ಕಹೊನ್ನಪ್ಪ.

8ಡಿ. ಶ್ರೀಮತಿ ಗೌರಿ ಬಿನ್ ಲೇಟ್ ಚಿಕ್ಕಹೊನ್ನಪ್ಪ.

8ಇ. ಶ್ರೀ ಲೋಕೇಶ್ ಬಿನ್ ಲೇಟ್ ಚಿಕ್ಕಹೊನ್ನಪ್ಪ.

8ಎಫ್. ಶ್ರೀ ಮಂಜುನಾಥ ಬಿನ್ ಲೇಟ್ ಚಿಕ್ಕಹೊನ್ನಪ್ಪ
ವಾಸ: ನಂ.47/ಎ, 2ನೇ ಮುಖ್ಯರಸ್ತೆ, 5ನೇ ಅಡ್ಡರಸ್ತೆ, ಬಾಪೂಜಿನಗರ, ಮೈಸೂರು ರಸ್ತೆ, ಬೆಂಗಳೂರು-26.

9. ಶ್ರೀ ಎ. ಗಂಗಾಧರಯ್ಯ
ನಂ.2027, 7ನೇ ಮುಖ್ಯರಸ್ತೆ, 2ನೇ ಹಂತ, ಡಿ ಬ್ಲಾಕ್, ರಾಜಾಜಿನಗರ, ಬೆಂಗಳೂರು-10.

10. ಶ್ರೀ ಪಿ.ಎಲ್.ಎಸ್. ಮಣಿ ಅಯ್ಯರ್,
ನಂ.120/ಬಿ, ಗುರುವಾಯಪ್ಪ ನಿಲಯ, 2ನೇ ಮುಖ್ಯರಸ್ತೆ, ಬಾಪೂಜಿನಗರ, ಮೈಸೂರು ರಸ್ತೆ, ಬೆಂಗಳೂರು-20.

11. ಶ್ರೀ ಚೆನ್ನಪ್ಪ
ನಂ.25/ಬಿ, 4ನೇ ಅಡ್ಡರಸ್ತೆ, 2ನೇ ಮುಖ್ಯರಸ್ತೆ, ಬಾಪೂಜಿನಗರ, ಮೈಸೂರು ರಸ್ತೆ, ಬೆಂಗಳೂರು-20.

ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ (ನಿ)., ಬಾಪೂಜಿನಗರ, ಬೆಂಗಳೂರು-26, ಈ ಸಂಘದ ಮಾಜಿ ಉಪಾಧ್ಯಕ್ಷರು ಆದ ಶ್ರೀ ಎಂ.ವಿ. ರುದ್ರಾಚಾರಿ ರವರು ಮೇಲ್ಕಂಡ ಸಂಘದಲ್ಲಿ ಹಣ ದುರುಪಯೋಗ ಮಾಡಿದ್ದರ ಹಿನ್ನಲೆಯಲ್ಲಿ ಕಲಂ 65 ಪರಿವೀಕ್ಷಣಾ ವರದಿ ಆಧಾರದ ಮೇಲೆ ಹಣದ ವಸೂಲಿಗಾಗಿ ಇಲಾಖಾ ವತಿಯಿಂದ ಸ್ವಯಂ ಪ್ರೇರಿತವಾದ ಅದಿಭಾರ ಅರ್ಜಿಯ ಸಂಖ್ಯೆ: ಡಿಆರ್‌ಬಿ-1/ ಎಸ್.ಸಿ/ 01/ 2001-02 ಪ್ರಕರಣ ದಾಖಲಿಸಿಕೊಂಡು ದಿನಾಂಕ:27.05.2002ರ ಆದೇಶದಲ್ಲಿ ಅವರ ಮತ್ತು ಅವರ ಸಂಬಂಧಿಕರ ಹೆಸರಿನಲ್ಲಿರುವ ಷೆಡ್ಯೂಲಿನಲ್ಲಿ ಕಾಣಿಸಿರುವ ಆಸ್ತಿಗಳನ್ನು ಸಹಕಾರ ಸಂಘಗಳ ಕಾಯಿದೆ ಕಲಂ 103ರ ಅಡಿಯಲ್ಲಿ ತೀರ್ಪಿಗೆ ಮುಂಚೆ ಜಪ್ತಿ ಮಾಡಲಾಗಿತ್ತು. ನಂತರ ದಿನಾಂಕ:04.12.2006ರ ತಿದ್ದುಪಡಿ ಆದೇಶದಲ್ಲಿ ಷೆಡ್ಯೂಲ್ ಸ್ವತ್ತಿನ ಅಳತೆ 55x40 ಅಳತೆಯನ್ನು 55x70 ಎಂದು ಮಾರ್ಪಡಿಸಿ ಆದೇಶಿಸಿದೆ. ನಂತರ ಸದರಿ ಪ್ರಕರಣವನ್ನು ವಿಚಾರಣೆ ನಡೆಸಿ ದಿನಾಂಕ:27.05.2002ರಂದು ತೀರ್ಪು ನೀಡಿ ಪ್ರತಿವಾದಿಗಳಿಂದ ರೂ.4,59,69,000/- (ನಾಲ್ಕು ಕೋಟಿ ಐವತ್ತೊಂಬತ್ತು ಲಕ್ಷದ ಅರವತ್ತೊಂಬತ್ತು ಸಾವಿರ ರೂಪಾಯಿ)ಗಳ ವಸೂಲಾತಿಗಾಗಿ ಆದೇಶ ನೀಡಲಾಗಿತ್ತು. ಅನಂತರ ಸದರಿ ಆದೇಶದ ಪ್ರಕಾರ, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ (ನಿ) ರವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ರವರ ಕಛೇರಿಯಲ್ಲಿ ದಿನಾಂಕ:15.12.2004ರಂದು ಅಮಲ್ಜಾರಿ ಅರ್ಜಿ ಸಂಖ್ಯೆ: ಸಿಇಪಿ/ 6161/ 2004-05ರಲ್ಲಿ ಒಂದು ಅಮಲ್ಜಾರಿ ಅರ್ಜಿ ಸಲ್ಲಿಸಲು ದಾಖಲು ಮಾಡಿರುತ್ತಾರೆ. ಅಲ್ಲದೆ ತೀರ್ಪು ಸಾಲಗಾರರಿಂದ ಬರಬೇಕಾದ ದುರುಪಯೋಗದ ಹಣ ರೂ.4,59,69,000/- (ನಾಲ್ಕು ಕೋಟಿ ಐವತ್ತೊಂಭತ್ತು ಲಕ್ಷದ ಅರವತ್ತೊಂಬತ್ತು ಸಾವಿರ ರೂಪಾಯಿ) ಮತ್ತು ಬಡ್ಡಿ ಹಾಗೂ ಇತರೇ ಖರ್ಚು ವಸೂಲಿಗಾಗಿ 2ನೇ ತೀರ್ಪು ಸಾಲಗಾರರಾದ ಶ್ರೀ ಎಂ.ವಿ. ರುದ್ರಾಚಾರ್ ರವರಿಗೆ ಸೇರಿದ ಈ ಕೆಳಗೆ ನಮೂದಿಸಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮೂಲಕ ಮಾರಾಟ ಮಾಡುವ ಸಲುವಾಗಿ ದಿನಾಂಕ:25.02.2005, 29.04.2005, 22.06.2005, 06.02.2006, 23.03.2006 ಮತ್ತು 12.06.2006 ರಂದು ಬಹಿರಂಗ ಹರಾಜು ಮಾಡಲು ದಿನಾಂಕ ನಿಗದಿಪಡಿಸಿ, ಸಹಕಾರ ಸಂಘಗಳ ಕಾಯಿದೆಯಡಿಯಲ್ಲಿ ಬಹಿರಂಗ ಹರಾಜಿನ ಪ್ರಕಟಣೆಗಳನ್ನು ನೀಡಲಾಗಿತ್ತು. ಮೇಲೆ ತಿಳಿಸಿದ ದಿನಾಂಕಗಳಂದು ಹರಾಜಿಗೆ ಇಟ್ಟಿದ್ದ ಸ್ವತ್ತನ್ನು ಸಾರ್ವಜನಿಕರು ಯಾರೂ ಮುಂದೆ ಬಂದು ಬಿಡ್ ಮಾಡದೆ ಇದ್ದ ಹಿನ್ನೆಲೆಯಲ್ಲಿ ಬಹಿರಂಗ ಹರಾಜನ್ನು ಮುಂದೂಡಿ ನಂತರ ದಿನಾಂಕ:12.06.2006ರಂದು ಬಹಿರಂಗ ಹರಾಜಿಗೆ ದಿನಾಂಕವನ್ನು ನಿಗದಿಪಡಿಸಿ ಬಹಿರಂಗ ಹರಾಜಿಗೆ ಒಳಪಡಿಸಲಾಯಿತು. ಅಂದೂ ಸಹ ಈ ಆಸ್ತಿಯನ್ನು ಬಹಿರಂಗ ಹರಾಜಿನಲ್ಲಿ ಖರೀದಿಸಲು ಯಾರೂ ಭಾಗವಹಿಸದೆ ಇದ್ದ ಪ್ರಯುಕ್ತ ಡಿಕ್ರಿದಾರ ಸಂಘವು ತನ್ನ ಹೆಸರಿಗೆ ವರ್ಗಾವಣೆ ಮಾಡಬೇಕೆಂದು ಸಂಘದ ಆಡಳಿತ ಮಂಡಳಿ ನಡವಳಿಯೊಂದಿಗೆ ಅರ್ಜಿಯನ್ನು ಮಾರಾಟಾಧಿಕಾರಿಯವರಿಗೆ ದಿನಾಂಕ:12.06.2006ರಂದು ನೀಡಿರುತ್ತಾರೆ. ಸಂಘವು ಸಲ್ಲಿಸಿದ ಪ್ರಸ್ತಾವೆಯನ್ನು ಪರಿಶೀಲಿಸಿ ಮಾರಾಟಾಧಿಕಾರಿಯವರು ದಿನಾಂಕ:15.06.2006ರಂದು ಈ ಕಛೇರಿಗೆ ಪತ್ರ ಬರೆದು ಜಡ್ಜ್‌ಮೆಂಟ್ ಡೆಟಾರುದಾರರಲ್ಲಿ ಒಬ್ಬರಾದ ಶ್ರೀ ಎಂ.ವಿ. ರುದ್ರಾಚಾರಿ ರವರ ವಾರಸುದಾರರಾದ ಶ್ರೀ ಬಿ.ಆರ್. ಪ್ರಕಾಶ್, ಶ್ರೀ ಬಿ.ಆರ್. ಸತೀಶ್ ಮತ್ತು ಶ್ರೀಮತಿ ಬಿ.ಆರ್. ಲತಾ ರವರಿಗೆ ಸೇರಿದ ಆಸ್ತಿಯನ್ನು ಸಂಘಕ್ಕೆ ವರ್ಗಾವಣೆ ಮಾಡಿಕೊಡಬೇಕೆಂದು ವಿನಂತಿಸಿಕೊಂಡಿರುತ್ತಾರೆ. ಸಂಘದ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಯವರ ಮನವಿ ಹಾಗೂ ಮಾರಾಟಾಧಿಕಾರಿ ನಡವಳಿ ಪುರಸ್ಕರಿಸಿ ಜಡ್ಜ್‌ಮೆಂಟ್ ಡೆಟಾರುದಾರರಿಗೆ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38 ಎ(3)ರನ್ವಯ ಈ ಕಛೇರಿಯಿಂದ ಕ್ರಮಸಂಖ್ಯೆ: ಎಆರ್‌ಬಿ-45/ ಅಮಲ್ಜಾರಿ ಸಂಖ್ಯೆ: ಸಿಇಪಿ 6161/ 2004-05 ದಿನಾಂಕ:22.06.2006ರಂದು ನೋಟೀಸ್ ಜಾರಿ ಮಾಡಿ ಡಿಕ್ರಿದಾರ ಸಂಘಕ್ಕೆ ಸಂದಾಯವಾಗಬೇಕಾದ ಬಾಕಿಯನ್ನು ಒಂದು ತಿಂಗಳೊಳಗೆ ಸಂದಾಯ ಮಾಡಬೇಕೆಂದೂ, ತಪ್ಪಿದಲ್ಲಿ ಡಿಕ್ರಿ ಹಾಗೂ ಅಮಲ್ಜಾರಿ ಹುಕುಂ ಹೊಂದಿರುವ ಆದೇಶದನ್ವಯ ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ (ನಿ)., ಬೆಂಗಳೂರು ಇವರಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 101 (ಬಿ) ಮತ್ತು ನಿಯಮ 38ಎ ಅನ್ವಯ ಮಾರಾಟವಾಗದ ಆಸ್ತಿಯನ್ನು ವರ್ಗಾವಣೆ ಮಾಡಲಾಗುವುದೆಂದು ತಿಳಿಸಲಾಗಿತ್ತು.

ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ಇವರು ಹೊರಡಿಸಿದ್ದ ಅಧಿಬಾರ ಅರ್ಜಿಯಲ್ಲಿ ಜಡ್ಜ್‌ಮೆಂಟ್ ಡೆಟಾರಿಗೆ ಸಂಬಂಧಿಸಿದ ಆಸ್ತಿ ಷೆಡ್ಯೂಲ್‌ನ ವಿವರಗಳಲ್ಲಿ ವ್ಯತ್ಯಾಸವನ್ನು ಸರಿಪಡಿಸಲು ಡಿಕ್ರಿದಾರರು ಕೋರಿಕೊಂಡಿದ್ದ ಕಾರಣ ಸದರಿ ಆದೇಶ ನೀಡುವವರೆಗೆ ಆಸ್ತಿಯನ್ನು ಡಿಕ್ರಿದಾರ ಸಂಘಕ್ಕೆ ವರ್ಗಾವಣೆ ಮಾಡಬಾರದೆಂದು ದಿನಾಂಕ:16.08.2006ರಲ್ಲಿ ಅರ್ಜಿ ಸಲ್ಲಿಸಿದ್ದುದರಿಂದ ಈ ಕಛೇರಿಯಿಂದ ವರ್ಗಾವಣೆ ಆದೇಶ ನೀಡಲು ತಡೆಹಿಡಿಯಲಾಗಿತ್ತು. ತೀರ್ಪು ಸಾಲಗಾರರು ದಿನಾಂಕ:22.06.2006ರಂದು ಈ ಕಛೇರಿಯಿಂದ ನೀಡಲಾದ ನೋಟಿಸಿನನ್ವಯ ಯಾವುದೇ ಮೊಬಲಗನ್ನು ಡಿಕ್ರಿದಾರ ಸಂಘಕ್ಕೆ ಸಂದಾಯ ಮಾಡದೆ ವಿಫಲರಾಗಿರುವ ಹಿನ್ನೆಲೆಯಲ್ಲಿ ಬಹಿರಂಗ ಹರಾಜಿಗೆ ಒಳಪಡಿಸಲಾಗಿದ್ದ ಆಸ್ತಿಯನ್ನು ಡಿಕ್ರಿದಾರ ಸಂಘಕ್ಕೆ ವರ್ಗಾಯಿಸುವುದು ಸೂಕ್ತ ಹಾಗೂ ಸಮರ್ಪಕವಾಗಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಎಆರ್‌ಬಿ/45/ ಅಮಲ್ಜಾರಿ ಸಂಖ್ಯೆ:/ ಸಿಇಪಿ 6161/ 2004-05, ದಿನಾಂಕ:17ನೇ ಜನವರಿ, 2007**

ಸದಾಶಿವಯ್ಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಮತ್ತು ವಸೂಲಾತಿ ಅಧಿಕಾರಿ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03 ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101(ಬಿ) ಅನ್ವಯ ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ(5) ರನ್ವಯ ದತ್ತವಾದ ಅಧಿಕಾರದ ಮೇರೆಗೆ ತೀರ್ಪು ಸಾಲಗಾರರಾದ 2ನೇ ಪ್ರತಿವಾದಿ ಲೇಟ್ ಶ್ರೀ ಎಂ.ವಿ. ರುದ್ರಾಚಾರಿ ರವರ ವಾರಸುದಾರರಾದ ಶ್ರೀ ಬಿ.ಆರ್. ಪ್ರಕಾಶ್, ಶ್ರೀ ಬಿ.ಆರ್. ಸತೀಶ್ ಮತ್ತು ಶ್ರೀಮತಿ ಬಿ.ಆರ್. ಲತಾ ಇವರುಗಳಿಗೆ ಸೇರಿದ ಈ ಕೆಳಗೆ ವಿವರಿಸಿದ ಷೆಡ್ಯೂಲ್ ಸ್ಥಿರಾಸ್ತಿಯನ್ನು ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ (ನಿ), ಬಾಪೂಜಿನಗರ, ಬೆಂಗಳೂರು-560026 ಇವರಿಗೆ ಈ ಕೆಳಕಂಡ ಷರತ್ತು ಮತ್ತು ನಿಯಮಗಳಿಗೆ ಒಳಪಟ್ಟು ವರ್ಗಾವಣೆ ಮಾಡಲಾಗಿದೆ ಹಾಗೂ ನಮೂನೆ 8ನ್ನು ಈ ಆದೇಶದೊಂದಿಗೆ ಲಗತ್ತಿಸಿದೆ.

**ಷೆಡ್ಯೂಲ್ ಆಸ್ತಿಗಳ ವಿವರ**

ಬೆಂಗಳೂರು ಮಹಾನಗರ ಪಾಲಿಕೆಗೆ ಬರುವ ನಂ.41, 1ನೇ ಮುಖ್ಯರಸ್ತೆ, ಅತ್ತಿಗುಪ್ಪೆ, ವಿಜಯನಗರ, ಬೆಂಗಳೂರು-560 040 ಇದರ ವಿಸ್ತೀರ್ಣ 55x70 ಅಡಿಗಳು ಅಂದರೆ 3850 ಚದರ ಅಡಿಗಳು ಹಾಗೂ ಇದರಲ್ಲಿರುವ ಕಟ್ಟಡಗಳು ಇದಕ್ಕೆ ಚೆಕ್ಕುಬಂದಿ:

**ಪೂರ್ವಕ್ಕೆ** - ರವೀಂದ್ರ ಇವರ ಮನೆ ನಂ.40
**ಪಶ್ಚಿಮಕ್ಕೆ** - ನಾರಾಯಣಪ್ಪ ಇವರ ಮನೆ
**ಉತ್ತರಕ್ಕೆ** - ತೋಟಗೆರೆ ಹನುಮಂತಪ್ಪ ಇವರ ಮನೆ
**ದಕ್ಷಿಣಕ್ಕೆ** - ರಸ್ತೆ.

**ಆಸ್ತಿಯ ವರ್ಗಾವಣೆಯ ಷರತ್ತುಗಳು:**

1. ತೀರ್ಪು ಸಾಲಗಾರರು (ಜಡ್ಜ್‌ಮೆಂಟ್ ಡೆಟಾರುದಾರರು) ಸಂಘಕ್ಕೆ ಸಂದಾಯ ಮಾಡಬೇಕಾದ ಬಾಕಿ ಹಣ ಮತ್ತು ಬಡ್ಡಿ ಹಾಗೂ ಇತರೆ ಖರ್ಚುಗಳನ್ನು 6 ತಿಂಗಳ ಅವಧಿಯೊಳಗೆ ಪಾವತಿಸಿದಲ್ಲಿ ವರ್ಗಾವಣೆ ಮಾಡಲಾದ ಆಸ್ತಿಯನ್ನು ತೀರ್ಪು ಸಾಲಗಾರರಿಗೆ ಬಿಟ್ಟುಕೊಡುವುದು.

2. ತೀರ್ಪು ಸಾಲಗಾರರು ಸಂದಾಯ ಮಾಡಬೇಕಾದ ಬಾಕಿ ಹಣವನ್ನು ಮರುಪಾವತಿಸಲು ವಿಫಲರಾದಲ್ಲಿ ವರ್ಗಾವಣೆ ಮಾಡಲಾದ ಆಸ್ತಿಯನ್ನು ಡಿಕ್ರಿದಾರ ಸಂಘದವರು ಈ ಕಛೇರಿಯಿಂದ ಅನುಮತಿ ಪಡೆದು ಬಹಿರಂಗ ಹರಾಜು ಮಾರಾಟ ಮಾಡತಕ್ಕದ್ದು. ಈ ಮಾರಾಟದಲ್ಲಿ ಸ್ವತ್ತಿನ ಮೂಲ ಒಡೆತನ ಹೊಂದಿದ ತೀರ್ಪು ಸಾಲಗಾರರಿಗೆ (ಜಡ್ಜ್‌ಮೆಂಟ್‌ದಾರರಿಗೆ) ಯಾವಾಗಲೂ ಮೊದಲ ಆದ್ಯತೆ ನೀಡತಕ್ಕದ್ದು. ಸದರಿ ಮಾರಾಟವು ನಿಬಂಧಕರ ಸ್ಥಿರೀಕರಣಕ್ಕೆ ಒಳಪಟ್ಟಿರತಕ್ಕದ್ದು.

3. ವರ್ಗಾವಣೆಯಾದ ಆಸ್ತಿಯನ್ನು ಸಂಘವು ತನ್ನ ಹೆಸರಿಗೆ ದಾಖಲೆಗಳನ್ನು ಸಂಬಂಧಪಟ್ಟ ಪ್ರಾಧಿಕಾರಕ್ಕೆ ಸಲ್ಲಿಸಿ ಹಕ್ಕನ್ನು ವರ್ಗಾಯಿಸಿಕೊಳ್ಳಲು ಕ್ರಮವಿಡತಕ್ಕದ್ದು.

4. ಡಿಕ್ರಿದಾರ ಸಂಘವು ನಿಯಮ 38ಎ(5)ರ ಮೇರೆಗೆ ತನಗೆ ವರ್ಗಾವಣೆಯಾದ ಈ ಸ್ವತ್ತನ್ನು ತನ್ನ ವಶಕ್ಕೆ ಪಡೆದು, ಈ ಆಸ್ತಿ ಸಂಬಂಧ, ಎಲ್ಲಾ ವೆಚ್ಚಗಳ ವಿವರಗಳನ್ನು ಪ್ರತ್ಯೇಕವಾಗಿ ನಿರ್ವಹಿಸತಕ್ಕದ್ದು. ಭೂ ಕಂದಾಯ ಮತ್ತು ಇತರೆ ಬಾಕಿಗಳು ಮತ್ತು ಈ ಸ್ವತ್ತಿನಿಂದ ಸ್ವೀಕೃತವಾದ ಎಲ್ಲಾ ಆದಾಯಗಳನ್ನು ತೋರಿಸುವ ಪ್ರತ್ಯೇಕ ಲೆಕ್ಕಪತ್ರಗಳನ್ನು ಇಟ್ಟಿರತಕ್ಕದ್ದು.

5. ಈ ಆಸ್ತಿಯನ್ನು ಮಾರಾಟ ಮಾಡುವವರೆಗೆ ಹೆಚ್ಚಿನ ಉತ್ಪನ್ನ ಬರುವ ರೀತ್ಯಾ ಉಪಯೋಗಿಸತಕ್ಕದ್ದು.

6. ಈ ಆಸ್ತಿಯನ್ನು ತೀರ್ಪು ಬಾಕಿದಾರರಿಂದ ಸಂಘಕ್ಕೆ ಬರಬೇಕಾಗಿರುವ ರೂ.4,59,69,000/- ಮೊಬಗಿನ ಪೈಕಿ ಭಾಗಶಃ ಮೊಬಲಿಗೆ ವರ್ಗಾಯಿಸಿದೆ. ಅಲ್ಲದೆ ಈ ಆಸ್ತಿ ವಿಲೇವಾರಿಯಿಂದ ಬಂದ ಮೊಬಲಗನ್ನು ಸಂಘದ ಸದಸ್ಯರು ಈ ಆಸ್ತಿ ವಿರುದ್ಧ ಅವಾರ್ಡ್ ಹೊಂದಿದ್ದಲ್ಲಿ ಮೊದಲ ಆದ್ಯತೆ ಮೇಲೆ ಮೊಬಲಗನ್ನು ಪಾವತಿಸತಕ್ಕದ್ದು.

ಈ ಆದೇಶವನ್ನು ತನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ:17.01.2007ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
2ನೇ ವಲಯ, ಬೆಂಗಳೂರು.

**ಫಾರಂ 8**

**ನಿಯಮ 38(ಎ)**

**(ಆದೇಶ ಸಂಖ್ಯೆ: ಎಆರ್‌ಬಿ-45/ ಅಮಲ್ಜಾರಿ ಸಂಖ್ಯೆ/ ಸಿಇಪಿ 6161/ 2004-05, ದಿನಾಂಕ:17.01.2007ಕ್ಕೆ ಅನುಬಂಧ)**

**ಕಲಂ 101ಬಿ ಅನ್ವಯ ಸ್ಥಿರಾಸ್ತಿಯನ್ನು ವರ್ಗಾವಣೆ ಮಾಡುವ ದೃಢೀಕರಣ ಪತ್ರ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 71 ರಡಿಯಲ್ಲಿ ಅಧಿಬಾರ ಸಂಖ್ಯೆ: ಡಿಆರ್‌ಬಿ-1/ ಎಸ್.ಸಿ.01/2001-02 ದಿನಾಂಕ:27.05.2002ರಲ್ಲಿ ಪಡೆದ ಅವಾರ್ಡ್‌ನ್ನು ಅಮಲ್ಜಾರಿಗೊಳಿಸಿ ಕೆಳಕಂಡ ಆಸ್ತಿಯನ್ನು ದಿನಾಂಕ:12.06.2006ರಂದು ಸಂಘದ ಹೆಸರಿಗೆ ನಿಲ್ಲಿಸಲಾಗಿತ್ತು. ಈ ಆಸ್ತಿಯನ್ನು ಯಾವುದೇ ಬಿಡ್ಡುದಾರರಿಲ್ಲದ ಕಾರಣ ಮಾರಾಟ ಮಾಡಲು ಸಾಧ್ಯವಾಗಿರುವುದಿಲ್ಲವೆಂದು ದೃಢಪಡಿಸಿಕೊಳ್ಳಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಕಾಯಿದೆಯ ಕಲಂ 101ಬಿ ಅನ್ವಯ ದಾವೆಯಲ್ಲಿನ ಜಡ್ಜ್‌ಮೆಂಟ್ ಡೆಟಾರ್‌ನ ಸದರಿ ಆಸ್ತಿಯಲ್ಲಿನ ಹಕ್ಕು ಬಾಧ್ಯತೆಗಳು ಸಂಘದ ಹೆಸರಿಗೆ ನಿಹಿತಗೊಂಡಿರುತ್ತದೆ ಮತ್ತು ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಇದನ್ನು ಸಂಘಕ್ಕೆ ವರ್ಗಾಯಿಸತಕ್ಕದ್ದು.

**ಷೆಡ್ಯೂಲ್ ಆಸ್ತಿಗಳ ವಿವರ**

ಬೆಂಗಳೂರು ಮಹಾನಗರ ಪಾಲಿಕೆಗೆ ಬರುವ ನಂ.41, 1ನೇ ಮುಖ್ಯರಸ್ತೆ, ಅತ್ತಿಗುಪ್ಪೆ, ವಿಜಯನಗರ, ಬೆಂಗಳೂರು-560 040 ಇದರ ವಿಸ್ತೀರ್ಣ 55x70 ಅಡಿಗಳು ಅಂದರೆ 3850 ಚದರ ಅಡಿಗಳು ಹಾಗೂ ಇದರಲ್ಲಿರುವ ಕಟ್ಟಡಗಳು ಇದಕ್ಕೆ ಚೆಕ್ಕುಬಂದಿ:

**ಪೂರ್ವಕ್ಕೆ** - ರವೀಂದ್ರ ಇವರ ಮನೆ ನಂ.40
**ಪಶ್ಚಿಮಕ್ಕೆ** - ನಾರಾಯಣಪ್ಪ ಇವರ ಮನೆ
**ಉತ್ತರಕ್ಕೆ** - ತೋಟಗೆರೆ ಹನುಮಂತಪ್ಪ ಇವರ ಮನೆ
**ದಕ್ಷಿಣಕ್ಕೆ** - ರಸ್ತೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
2ನೇ ವಲಯ, ಬೆಂಗಳೂರು.

ಪಿ.ಆರ್.99

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ ಹಾಗೂ ವಸೂಲಾಧಿಕಾರಿಯವರು, ನಂ.146, 3ನೇ ಮುಖ್ಯರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-560 003 ಇವರ ಕಾರ್ಯಾಲಯ**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101(ಬಿ) ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ (8) (ಬಿ) ಮೇರೆಗೆ ನೀಡಲಾದ ಮಾರಾಟ ಮಾಡಲಾಗದ ಆಸ್ತಿಯ ವರ್ಗಾವಣೆ ಪ್ರಮಾಣ ಪತ್ರ**

1) ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ರವರ ಅಧಿಬಾರ ಅರ್ಜಿಯ ಸಂಖ್ಯೆ: ಡಿಆರ್‌ಬಿ-1/ ಎಸ್‌ಸಿ/ 01/ 2001-02 ದಿನಾಂಕ: 27.05.2002.
2) ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ರವರ ನ್ಯಾಯಾಲಯದ ತಿದ್ದುಪಡಿ ಆದೇಶದ ಅಧಿಬಾರ ಅರ್ಜಿ ಸಂಖ್ಯೆ: ಡಿಆರ್‌ಬಿ-1/ ಅಧಿಬಾರ/ 1/ 2001-02 ದಿನಾಂಕ:04.12.2006 (ಸ್ವೀಕೃತಿ ದಿನಾಂಕ:03.01.2007)
3) ಈ ಕಛೇರಿ ಕಡತಕ್ಕೆ ಸಂಬಂಧಿಸಿದ ಅಮಲ್ಜಾರಿ ಅರ್ಜಿ ಸಂಖ್ಯೆ ಎಆರ್‌ಬಿ 45/ 6161/ 2004-05.

**ಡಿಕ್ರಿ ಹೋಲ್ಡರ್:** ಕಾರ್ಯದರ್ಶಿ, ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬಾಪೂಜಿನಗರ, ಬೆಂಗಳೂರು-560026 (ಸ್ವಯಂಪ್ರೇರಿತ)

**ತೀರ್ಪುಗಾರರು:**

1. ಶ್ರೀ ಡಿ. ರಾಜ್‌ಕುಮಾರ್,
ನಂ.100, ಆರ್.ಕೆ. ಹೌಸ್, ಸರ್ವೀಸ್ ರಸ್ತೆ, ವಿಜಯನಗರ, 2ನೇ ಹಂತ, ಬೆಂಗಳೂರು-560040.

2. ಶ್ರೀ ಎಂ.ವಿ. ರುದ್ರಾಚಾರ್ (ಮೃತರಾಗಿರುತ್ತಾರೆ) ಇವರ ವಾರಸುದಾರರು

2ಎ. ಶ್ರೀ ಬಿ.ಆರ್. ಪ್ರಕಾಶ್ ಬಿನ್ ಲೇಟ್ ಎಂ.ವಿ. ರುದ್ರಾಚಾರ್,
ನಂ.41, 1ನೇ ಮುಖ್ಯರಸ್ತೆ, 2ನೇ ಹಂತ, ಅತ್ತಿಗುಪ್ಪೆ, ವಿಜಯನಗರ, ಬೆಂಗಳೂರು-40.

2ಬಿ. ಶ್ರೀ ಬಿ.ಆರ್. ಸತೀಶ್ ಬಿನ್ ಲೇಟ್ ಎಂ.ವಿ. ರುದ್ರಾಚಾರ್,
ನಂ. 41, 1ನೇ ಮುಖ್ಯ ರಸ್ತೆ, 2ನೇ ಹಂತ, ಅತ್ತಿಗುಪ್ಪೆ, ವಿಜಯನಗರ, ಬೆಂಗಳೂರು-40.

2ಸಿ. ಶ್ರೀಮತಿ ಬಿ.ಆರ್. ಲತಾ, ಬಿನ್ ಲೇಟ್ ಎಂ.ವಿ. ರುದ್ರಾಚಾರ್,
ನಂ.134, 8ನೇ ಅಡ್ಡರಸ್ತೆ, ಬಾಪೂಜಿನಗರ, ಬೆಂಗಳೂರು-40.

3. ಶ್ರೀ ಡಿ.ಎನ್. ಹನುಮಯ್ಯ,
ನಂ.1ನೇ ಮುಖ್ಯರಸ್ತೆ, ಆರ್.ಪಿ.ಸಿ. ಬಡಾವಣೆ, ವಿಜಯನಗರ, ಬೆಂಗಳೂರು-560040.

4. ಶ್ರೀ ರಾಮಯ್ಯ ಪಿ.ಎಸ್.
ನಂ.20, ಸರಸ್ವತಿನಗರ, ವಿಜಯನಗರ, ಬೆಂಗಳೂರು-40.

5. ಶ್ರೀ ಪೂವಯ್ಯ,
ನಂ.11, 2ನೇ ಅಡ್ಡರಸ್ತೆ, ವಿಠಲನಗರ, ಟಿ.ಆರ್. ಮಿಲ್ ರಸ್ತೆ, ಚಾಮರಾಜಪೇಟೆ, ಬೆಂಗಳೂರು-560018.

6. ಶ್ರೀಮತಿ ಪ್ರೇಮಾಬಾಯಿ,
ನಂ.42/ಎ, 2ನೇ ಮುಖ್ಯರಸ್ತೆ, 5ನೇ ಅಡ್ಡರಸ್ತೆ, ಬಾಪೂಜಿನಗರ, ಮೈಸೂರು ರಸ್ತೆ, ಬೆಂಗಳೂರು-26.

7. ಶ್ರೀ ನಾರಾಯಣಗೌಡ,
ನಂ.616, 7ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು-40.

8. ಶ್ರೀ ಕೆ. ಚಿಕ್ಕಹೊನ್ನಪ್ಪ (ಮೃತರಾಗಿರುತ್ತಾರೆ)
ಇವರ ವಾರಸುದಾರರು

8ಎ. ಶ್ರೀಮತಿ ಸಿದ್ದಮ್ಮ, ಕೋಂ ಲೇಟ್ ಚಿಕ್ಕಹೊನ್ನಪ್ಪ

8ಬಿ. ಶ್ರೀಮತಿ ಲತಾ, ಬಿನ್ ಲೇಟ್ ಚಿಕ್ಕಹೊನ್ನಪ್ಪ

8ಸಿ. ಶ್ರೀಮತಿ ಲಕ್ಷ್ಮಿ ಬಿನ್ ಲೇಟ್ ಚಿಕ್ಕಹೊನ್ನಪ್ಪ.

8ಡಿ. ಶ್ರೀಮತಿ ಗೌರಿ ಬಿನ್ ಲೇಟ್ ಚಿಕ್ಕಹೊನ್ನಪ್ಪ.

8ಇ. ಶ್ರೀ ಲೋಕೇಶ್ ಬಿನ್ ಲೇಟ್ ಚಿಕ್ಕಹೊನ್ನಪ್ಪ.

8ಎಫ್. ಶ್ರೀ ಮಂಜುನಾಥ ಬಿನ್ ಲೇಟ್ ಚಿಕ್ಕಹೊನ್ನಪ್ಪ
ವಾಸ: ನಂ.47/ಎ, 2ನೇ ಮುಖ್ಯರಸ್ತೆ, 5ನೇ ಅಡ್ಡರಸ್ತೆ, ಬಾಪೂಜಿನಗರ, ಮೈಸೂರು ರಸ್ತೆ, ಬೆಂಗಳೂರು-26.

9. ಶ್ರೀ ಎ. ಗಂಗಾಧರಯ್ಯ
ನಂ.2027, 7ನೇ ಮುಖ್ಯರಸ್ತೆ, 2ನೇ ಹಂತ, ಡಿ ಬ್ಲಾಕ್, ರಾಜಾಜಿನಗರ, ಬೆಂಗಳೂರು-10.

10. ಶ್ರೀ ಪಿ.ಎಲ್.ಎಸ್. ಮಣಿ ಅಯ್ಯರ್,
ನಂ.120/ಬಿ, ಗುರುವಾಯಪ್ಪ ನಿಲಯ, 2ನೇ ಮುಖ್ಯರಸ್ತೆ, ಬಾಪೂಜಿನಗರ, ಮೈಸೂರು ರಸ್ತೆ, ಬೆಂಗಳೂರು-20.

11. ಶ್ರೀ ಚೆನ್ನಪ್ಪ
ನಂ.25/ಬಿ, 4ನೇ ಅಡ್ಡರಸ್ತೆ, 2ನೇ ಮುಖ್ಯರಸ್ತೆ, ಬಾಪೂಜಿನಗರ, ಮೈಸೂರು ರಸ್ತೆ, ಬೆಂಗಳೂರು-20.

ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ (ನಿ)., ಬಾಪೂಜಿನಗರ, ಬೆಂಗಳೂರು-26, ಈ ಸಂಘದ ಮಾಜಿ ಉಪಾಧ್ಯಕ್ಷರು ಆದ ಶ್ರೀ ಎಂ.ವಿ. ರುದ್ರಾಚಾರಿ ರವರು ಮೇಲ್ಕಂಡ ಸಂಘದಲ್ಲಿ ಹಣ ದುರುಪಯೋಗ ಮಾಡಿದ್ದರ ಹಿನ್ನಲೆಯಲ್ಲಿ ಕಲಂ 65 ಪರಿವೀಕ್ಷಣಾ ವರದಿ ಆಧಾರದ ಮೇಲೆ ಹಣದ ವಸೂಲಿಗಾಗಿ ಇಲಾಖಾ ವತಿಯಿಂದ ಸ್ವಯಂ ಪ್ರೇರಿತವಾದ ಅದಿಭಾರ ಅರ್ಜಿಯ ಸಂಖ್ಯೆ: ಡಿಆರ್‌ಬಿ-1/ ಎಸ್.ಸಿ/ 01/ 2001-02 ಪ್ರಕರಣ ದಾಖಲಿಸಿಕೊಂಡು ದಿನಾಂಕ:27.05.2002ರ ಆದೇಶದಲ್ಲಿ ಅವರ ಮತ್ತು ಅವರ ಸಂಬಂಧಿಕರ ಹೆಸರಿನಲ್ಲಿರುವ ಷೆಡ್ಯೂಲಿನಲ್ಲಿ ಕಾಣಿಸಿರುವ ಆಸ್ತಿಗಳನ್ನು ಸಹಕಾರ ಸಂಘಗಳ ಕಾಯಿದೆ ಕಲಂ 103ರ ಅಡಿಯಲ್ಲಿ ತೀರ್ಪಿಗೆ ಮುಂಚೆ ಜಪ್ತಿ ಮಾಡಲಾಗಿತ್ತು. ನಂತರ ದಿನಾಂಕ:04.12.2006ರ ತಿದ್ದುಪಡಿ ಆದೇಶದಲ್ಲಿ ರಾಮಸದ್ರ ಗ್ರಾಮವನ್ನು ಸೊಣ್ಣೇನಹಳ್ಳಿ ಗ್ರಾಮವೆಂದು ಹಾಗೂ ಇದರ ಸರ್ವೆ ನಂ.29 ನ್ನು 29/1 ಎಂದು ಮಾರ್ಪಡಿಸಿ ಆದೇಶಿಸಿದೆ. ಅನಂತರ ಸದರಿ ಪ್ರಕರಣವನ್ನು ವಿಚಾರಣೆ ನಡೆಸಿ ದಿನಾಂಕ:27.05.2002ರಂದು ತೀರ್ಪು ನೀಡಿ ಪ್ರತಿವಾದಿಗಳಿಂದ ರೂ.4,59,69,000/- (ನಾಲ್ಕು ಕೋಟಿ ಐವತ್ತೊಂಬತ್ತು ಲಕ್ಷದ ಅರವತ್ತೊಂಬತ್ತು ಸಾವಿರ ರೂಪಾಯಿ)ಗಳ ವಸೂಲಾತಿಗಾಗಿ ಆದೇಶ ನೀಡಲಾಗಿತ್ತು. ಅನಂತರ ಸದರಿ ಆದೇಶದ ಪ್ರಕಾರ, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಬಾಪೂಜಿ ಗೃಹನಿರ್ಮಾಣ ಸಹಕಾರ ಸಂಘ (ನಿ) ರವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ರವರ ಕಛೇರಿಯಲ್ಲಿ ದಿನಾಂಕ:15.12.2004ರಂದು ಅಮಲ್ಜಾರಿ ಅರ್ಜಿ ಸಂಖ್ಯೆ: ಸಿಇಪಿ/ 6161/ 2004-05ರಲ್ಲಿ ಒಂದು ಅಮಲ್ಜಾರಿ ಅರ್ಜಿ ಸಲ್ಲಿಸಲು ದಾಖಲು ಮಾಡಿರುತ್ತಾರೆ. ಅಲ್ಲದೆ ತೀರ್ಪು ಸಾಲಗಾರರಿಂದ ಬರಬೇಕಾದ ದುರುಪಯೋಗದ ಹಣ ರೂ.4,59,69,000/- (ನಾಲ್ಕು ಕೋಟಿ ಐವತ್ತೊಂಭತ್ತು ಲಕ್ಷದ ಅರವತ್ತೊಂಬತ್ತು ಸಾವಿರ ರೂಪಾಯಿ) ಮತ್ತು ಬಡ್ಡಿ ಹಾಗೂ ಇತರೇ ಖರ್ಚು ವಸೂಲಿಗಾಗಿ 2ನೇ ತೀರ್ಪು ಸಾಲಗಾರರಾದ ಶ್ರೀ ಎಂ.ವಿ. ರುದ್ರಾಚಾರ್ ರವರಿಗೆ ಸೇರಿದ ಈ ಕೆಳಗೆ ನಮೂದಿಸಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮೂಲಕ ಮಾರಾಟ ಮಾಡುವ ಸಲುವಾಗಿ ದಿನಾಂಕ:05.05.2005, 05.07.2005 ಎರಡು ಬಾರಿ ಹರಾಜು ಮಾಡಲು ದಿನಾಂಕ ನಿಗದಿಪಡಿಸಿ, ಸಹಕಾರ ಸಂಘಗಳ ಕಾಯಿದೆಯಡಿಯಲ್ಲಿ ಬಹಿರಂಗ ಹರಾಜಿನ ಪ್ರಕಟಣೆಗಳನ್ನು ನೀಡಲಾಗಿತ್ತು. ಮೇಲೆ ತಿಳಿಸಿದ ದಿನಾಂಕಗಳಂದು ಹರಾಜಿಗೆ ಇಟ್ಟಿದ್ದ ಸ್ವತ್ತನ್ನು ಸಾರ್ವಜನಿಕರು ಯಾರೂ ಮುಂದೆ ಬಂದು ಬಿಡ್ ಮಾಡದೆ ಇದ್ದ ಹಿನ್ನೆಲೆಯಲ್ಲಿ ಬಹಿರಂಗ ಹರಾಜನ್ನು ಮುಂದೂಡಿ ನಂತರ ದಿನಾಂಕ:29.08.2005ರಂದು ಮೂರನೇ ಬಾರಿಗೆ ಬಹಿರಂಗ ಹರಾಜಿಗೆ ದಿನಾಂಕವನ್ನು ನಿಗದಿಪಡಿಸಿ ಬಹಿರಂಗ ಹರಾಜಿಗೆ ಒಳಪಡಿಸಲಾಯಿತು. ಅಂದೂ ಸಹ ಈ ಆಸ್ತಿಯನ್ನು ಬಹಿರಂಗ ಹರಾಜಿನಲ್ಲಿ ಖರೀದಿಸಲು ಯಾರೂ ಭಾಗವಹಿಸದೆ ಇದ್ದ ಪ್ರಯುಕ್ತ ಡಿಕ್ರಿದಾರ ಸಂಘವು ತನ್ನ ಹೆಸರಿಗೆ ವರ್ಗಾವಣೆ ಮಾಡಬೇಕೆಂದು ಸಂಘದ ಆಡಳಿತ ಮಂಡಳಿ ನಡವಳಿಯೊಂದಿಗೆ ಅರ್ಜಿಯನ್ನು ಮಾರಾಟಾಧಿಕಾರಿಯವರಿಗೆ ದಿನಾಂಕ:29.08.2005ರಂದು ನೀಡಿರುತ್ತಾರೆ. ಸಂಘವು ಸಲ್ಲಿಸಿದ ಪ್ರಸ್ತಾವೆಯನ್ನು ಪರಿಶೀಲಿಸಿ ಮಾರಾಟಾಧಿಕಾರಿಯವರು ದಿನಾಂಕ:05.09.2005, 14.02.2006ರಂದು ಈ ಕಛೇರಿಗೆ ಪತ್ರ ಬರೆದು ಜಡ್ಜ್‌ಮೆಂಟ್ ಡೆಟಾರುದಾರರಲ್ಲಿ ಒಬ್ಬರಾದ ಶ್ರೀ ಎಂ.ವಿ. ರುದ್ರಾಚಾರಿ ರವರ ವಾರಸುದಾರರಾದ ಶ್ರೀ ಬಿ.ಆರ್. ಪ್ರಕಾಶ್, ಶ್ರೀ ಬಿ.ಆರ್. ಸತೀಶ್ ಮತ್ತು ಶ್ರೀಮತಿ ಬಿ.ಆರ್. ಲತಾ ರವರಿಗೆ ಸೇರಿದ ಆಸ್ತಿಯನ್ನು ಸಂಘಕ್ಕೆ ವರ್ಗಾವಣೆ ಮಾಡಿಕೊಡಬೇಕೆಂದು ವಿನಂತಿಸಿಕೊಂಡಿರುತ್ತಾರೆ. ಸಂಘದ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರ ಮನವಿ ಹಾಗೂ ಮಾರಾಟಾಧಿಕಾರಿ ನಡವಳಿ ಪುರಸ್ಕರಿಸಿ ಜಡ್ಜ್‌ಮೆಂಟ್ ಡೆಟಾರುದಾರರಿಗೆ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38 ಎ(3)ರನ್ವಯ ಈ ಕಛೇರಿಯಿಂದ ಕ್ರಮಸಂಖ್ಯೆ: ಎಆರ್‌ಬಿ-45/ ಅಮಲ್ಜಾರಿ ಸಂಖ್ಯೆ: ಸಿಇಪಿ 6161/ 2004-05 ದಿನಾಂಕ:22.06.2006ರಂದು ನೋಟೀಸ್ ಜಾರಿ ಮಾಡಿ ಡಿಕ್ರಿದಾರ ಸಂಘಕ್ಕೆ ಸಂದಾಯವಾಗಬೇಕಾದ ಬಾಕಿಯನ್ನು ಒಂದು ತಿಂಗಳೊಳಗೆ ಸಂದಾಯ ಮಾಡಬೇಕೆಂದೂ, ತಪ್ಪಿದಲ್ಲಿ ಡಿಕ್ರಿ ಹಾಗೂ ಅಮಲ್ಜಾರಿ ಹುಕುಂ ಹೊಂದಿರುವ ಆದೇಶದನ್ವಯ ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ (ನಿ)., ಬೆಂಗಳೂರು ಇವರಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 101 (ಬಿ) ಮತ್ತು ನಿಯಮ 38ಎ ಅನ್ವಯ ಮಾರಾಟವಾಗದ ಆಸ್ತಿಯನ್ನು ವರ್ಗಾವಣೆ ಮಾಡಲಾಗುವುದೆಂದು ತಿಳಿಸಲಾಗಿತ್ತು.

ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ಇವರು ಹೊರಡಿಸಿದ್ದ ಅಧಿಭಾರ ಅರ್ಜಿಯಲ್ಲಿ ಜಡ್ಜ್‌ಮೆಂಟ್ ಡೆಟಾರಿಗೆ ಸಂಬಂಧಿಸಿದ ಆಸ್ತಿ ಷೆಡ್ಯೂಲ್‌ನ ವಿವರಗಳಲ್ಲಿ ವ್ಯತ್ಯಾಸವನ್ನು ಸರಿಪಡಿಸಲು ಡಿಕ್ರಿದಾರರು ಕೋರಿಕೊಂಡಿದ್ದ ಕಾರಣ ಸದರಿ ಆದೇಶ ನೀಡುವವರೆಗೆ ಆಸ್ತಿಯನ್ನು ಡಿಕ್ರಿದಾರ ಸಂಘಕ್ಕೆ ವರ್ಗಾವಣೆ ಮಾಡಬಾರದೆಂದು ದಿನಾಂಕ:16.08.2006ರಲ್ಲಿ ಅರ್ಜಿ ಸಲ್ಲಿಸಿದ್ದುದರಿಂದ ಈ ಕಛೇರಿಯಿಂದ ವರ್ಗಾವಣೆ ಆದೇಶ ನೀಡಲು ತಡೆಹಿಡಿಯಲಾಗಿತ್ತು. ತೀರ್ಪು ಸಾಲಗಾರರು ದಿನಾಂಕ:22.06.2006ರಂದು ಈ ಕಛೇರಿಯಿಂದ ನೀಡಲಾದ ನೋಟಿಸಿನನ್ವಯ ಯಾವುದೇ ಮೊಬಲಗನ್ನು ಡಿಕ್ರಿದಾರ ಸಂಘಕ್ಕೆ ಸಂದಾಯ ಮಾಡದೆ ವಿಫಲರಾಗಿರುವ ಹಿನ್ನೆಲೆಯಲ್ಲಿ ಬಹಿರಂಗ ಹರಾಜಿಗೆ ಒಳಪಡಿಸಲಾಗಿದ್ದ ಆಸ್ತಿಯನ್ನು ಡಿಕ್ರಿದಾರ ಸಂಘಕ್ಕೆ ವರ್ಗಾಯಿಸುವುದು ಸೂಕ್ತ ಹಾಗೂ ಸಮರ್ಪಕವಾಗಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

## ಆದೇಶ

## ಸಂಖ್ಯೆ: ಎಆರ್‌ಬಿ/45/ ಅಮಲ್ಜಾರಿ ಸಂಖ್ಯೆ:/ ಸಿಇಪಿ 6161/ 2004-05, ದಿನಾಂಕ:17ನೇ ಜನವರಿ, 2007

ಸದಾಶಿವಯ್ಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಮತ್ತು ವಸೂಲಾತಿ ಅಧಿಕಾರಿ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03 ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101(ಬಿ) ಅನ್ವಯ ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ(5) ರನ್ವಯ ದತ್ತವಾದ ಅಧಿಕಾರದ ಮೇರೆಗೆ ತೀರ್ಪು ಸಾಲಗಾರರಾದ 2ನೇ ಪ್ರತಿವಾದಿ ಲೇಟ್ ಶ್ರೀ ಎಂ.ವಿ. ರುದ್ರಾಚಾರಿ ರವರ ವಾರಸುದಾರರಾದ ಶ್ರೀ ಬಿ.ಆರ್. ಪ್ರಕಾಶ್, ಶ್ರೀ ಬಿ.ಆರ್. ಸತೀಶ್ ಮತ್ತು ಶ್ರೀಮತಿ ಬಿ.ಆರ್. ಲತಾ ಇವರುಗಳಿಗೆ ಸೇರಿದ ಈ ಕೆಳಗೆ ವಿವರಿಸಿದ ಷೆಡ್ಯೂಲ್ ಸ್ಥಿರಾಸ್ತಿಯನ್ನು ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ (ನಿ), ಬಾಪೂಜಿನಗರ, ಬೆಂಗಳೂರು-560026 ಇವರಿಗೆ ಈ ಕೆಳಕಂಡ ಷರತ್ತು ಮತ್ತು ನಿಯಮಗಳಿಗೆ ಒಳಪಟ್ಟು ವರ್ಗಾವಣೆ ಮಾಡಲಾಗಿದೆ ಹಾಗೂ ನಮೂನೆ 8ನ್ನು ಈ ಆದೇಶದೊಂದಿಗೆ ಲಗತ್ತಿಸಿದೆ.

**ಷೆಡ್ಯೂಲ್ ಆಸ್ತಿಗಳ ವಿವರ**

ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಸೊಣ್ಣೇನಹಳ್ಳಿ ಗ್ರಾಮದ ಸರ್ವೆ ನಂ.29/1, ಮನೆ ನಂ.2, ಖಾತೆ ನಂ.59 ರಲ್ಲಿನ 5 ಚದರ ಅಡಿ, ಆರ್.ಸಿ.ಸಿ. ಮನೆ ಪೂರ್ವ-ಪಶ್ಚಿಮ: 56 ಅಡಿ, ಉತ್ತರ-ದಕ್ಷಿಣ 65 ಅಡಿ ನಿವೇಶನ ಹೊರತುಪಡಿಸಿ ಪೂರ್ವ-ಪಶ್ಚಿಮ 89 ಅಡಿ, ಉತ್ತರ-ದಕ್ಷಿಣ 100 ಅಡಿ ನಿವೇಶನದಲ್ಲಿರುವ ಕಟ್ಟಡಗಳು ಹಾಗೂ ಸದರಿ ನಿವೇಶನದಲ್ಲಿರುವ ಜ್ಞಾನೇಶ್ ಸ್ಕೂಲ್ ಆಫ್ ನರ್ಸಿಂಗ್ ಕಟ್ಟಡ ಮತ್ತು ಈ ಕಟ್ಟಡದ ಬಲ ಭಾಗದ ಎದುರಿಗೆ ಇರುವ ನೆಲ ಅಂತಸ್ತು ಮತ್ತು ಮೊದಲನೇ ಮಹಡಿ ಕಟ್ಟಡ ಮತ್ತು ಇದಕ್ಕೆ ಚೆಕ್ಕುಬಂದಿ:

**ಪೂರ್ವಕ್ಕೆ** - ಬೇರೆಯವರ ಸ್ವತ್ತು

**ಪಶ್ಚಿಮಕ್ಕೆ** - ಸರ್ವೆ ನಂ.29ರ ಸ್ವತ್ತು

**ಉತ್ತರಕ್ಕೆ** - ಸರ್ವೆ ನಂ.27 ಮತ್ತು 28ರ ತೀರ್ಪು ಸಾಲಗಾರರ ಸ್ವತ್ತು

**ದಕ್ಷಿಣಕ್ಕೆ** - ಬೇರೆಯವರ ಸ್ವತ್ತು.

**ಆಸ್ತಿಯ ವರ್ಗಾವಣೆಯ ಷರತ್ತುಗಳು:**

1. ತೀರ್ಪು ಸಾಲಗಾರರು (ಜಡ್ಜ್‌ಮೆಂಟ್ ಡೆಟಾರುದಾರರು) ಸಂಘಕ್ಕೆ ಸಂದಾಯ ಮಾಡಬೇಕಾದ ಬಾಕಿ ಹಣ ಮತ್ತು ಬಡ್ಡಿ ಹಾಗೂ ಇತರೆ ಖರ್ಚುಗಳನ್ನು 6 ತಿಂಗಳ ಅವಧಿಯೊಳಗೆ ಪಾವತಿಸಿದಲ್ಲಿ ವರ್ಗಾವಣೆ ಮಾಡಲಾದ ಆಸ್ತಿಯನ್ನು ತೀರ್ಪು ಸಾಲಗಾರರಿಗೆ ಬಿಟ್ಟುಕೊಡುವುದು.

2. ತೀರ್ಪು ಸಾಲಗಾರರು ಸಂದಾಯ ಮಾಡಬೇಕಾದ ಬಾಕಿ ಹಣವನ್ನು ಮರುಪಾವತಿಸಲು ವಿಫಲರಾದಲ್ಲಿ ವರ್ಗಾವಣೆ ಮಾಡಲಾದ ಆಸ್ತಿಯನ್ನು ಡಿಕ್ರಿದಾರ ಸಂಘದವರು ಈ ಕಛೇರಿಯಿಂದ ಅನುಮತಿ ಪಡೆದು ಬಹಿರಂಗ ಹರಾಜು ಮಾರಾಟ ಮಾಡತಕ್ಕದ್ದು. ಈ ಮಾರಾಟದಲ್ಲಿ ಸ್ವತ್ತಿನ ಮೂಲ ಒಡೆತನ ಹೊಂದಿದ ತೀರ್ಪು ಸಾಲಗಾರರಿಗೆ (ಜಡ್ಜ್‌ಮೆಂಟ್‌ದಾರರಿಗೆ) ಯಾವಾಗಲೂ ಮೊದಲ ಆದ್ಯತೆ ನೀಡತಕ್ಕದ್ದು. ಸದರಿ ಮಾರಾಟವು ನಿಬಂಧಕರ ಸ್ಥಿರೀಕರಣಕ್ಕೆ ಒಳಪಟ್ಟಿರತಕ್ಕದ್ದು.

3. ವರ್ಗಾವಣೆಯಾದ ಆಸ್ತಿಯನ್ನು ಸಂಘವು ತನ್ನ ಹೆಸರಿಗೆ ದಾಖಲೆಗಳನ್ನು ಸಂಬಂಧಪಟ್ಟ ಪ್ರಾಧಿಕಾರಕ್ಕೆ ಸಲ್ಲಿಸಿ ಹಕ್ಕನ್ನು ವರ್ಗಾಯಿಸಿಕೊಳ್ಳಲು ಕ್ರಮವಿಡತಕ್ಕದ್ದು.

4. ಡಿಕ್ರಿದಾರ ಸಂಘವು ನಿಯಮ 38ಎ(5)ರ ಮೇರೆಗೆ ತನಗೆ ವರ್ಗಾವಣೆಯಾದ ಈ ಸ್ವತ್ತನ್ನು ತನ್ನ ವಶಕ್ಕೆ ಪಡೆದು, ಈ ಆಸ್ತಿ ಸಂಬಂಧ, ಎಲ್ಲಾ ವೆಚ್ಚಗಳ ವಿವರಗಳನ್ನು ಪ್ರತ್ಯೇಕವಾಗಿ ನಿರ್ವಹಿಸತಕ್ಕದ್ದು. ಭೂ ಕಂದಾಯ ಮತ್ತು ಇತರೆ ಬಾಕಿಗಳು ಮತ್ತು ಈ ಸ್ವತ್ತಿನಿಂದ ಸ್ವೀಕೃತವಾದ ಎಲ್ಲಾ ಆದಾಯಗಳನ್ನು ತೋರಿಸುವ ಪ್ರತ್ಯೇಕ ಲೆಕ್ಕಪತ್ರಗಳನ್ನು ಇಟ್ಟಿರತಕ್ಕದ್ದು.

5. ಈ ಆಸ್ತಿಯನ್ನು ಮಾರಾಟ ಮಾಡುವವರೆಗೆ ಹೆಚ್ಚಿನ ಉತ್ಪನ್ನ ಬರುವ ರೀತ್ಯಾ ಉಪಯೋಗಿಸತಕ್ಕದ್ದು.

6. ಈ ಆಸ್ತಿಯನ್ನು ತೀರ್ಪು ಬಾಕಿದಾರರಿಂದ ಸಂಘಕ್ಕೆ ಬರಬೇಕಾಗಿರುವ ರೂ.4,59,69,000/- ಮೊಬಲಗಿನ ಪೈಕಿ ಭಾಗಶಃ ಮೊಬಲಿಗೆ ವರ್ಗಾಯಿಸಿದೆ. ಅಲ್ಲದೆ ಈ ಆಸ್ತಿ ವಿಲೇವಾರಿಯಿಂದ ಬಂದ ಮೊಬಲಗನ್ನು ಸಂಘದ ಸದಸ್ಯರು ಈ ಆಸ್ತಿ ವಿರುದ್ಧ ಅವಾರ್ಡ್ ಹೊಂದಿದ್ದಲ್ಲಿ ಮೊದಲ ಆದ್ಯತೆ ಮೇಲೆ ಮೊಬಲಗನ್ನು ಪಾವತಿಸತಕ್ಕದ್ದು.

ಆದೇಶವನ್ನು ತನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ:17.01.2007ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
2ನೇ ವಲಯ, ಬೆಂಗಳೂರು.

**ಫಾರಂ 8**

**ನಿಯಮ 38(ಎ)**

**(ಆದೇಶ ಸಂಖ್ಯೆ: ಎಆರ್‌ಬಿ-45/ ಅಮಲ್ಜಾರಿ ಸಂಖ್ಯೆ/ ಸಿಇಪಿ 6161/ 2004-05, ದಿನಾಂಕ:17.01.2007ಕ್ಕೆ ಅನುಬಂಧ)**

**ಕಲಂ 101ಬಿ ಅನ್ವಯ ಸ್ಥಿರಾಸ್ತಿಯನ್ನು ವರ್ಗಾವಣೆ ಮಾಡುವ ದೃಢೀಕರಣ ಪತ್ರ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 71 ರಡಿಯಲ್ಲಿ ಅಧಿಕಾರ ಸಂಖ್ಯೆ: ಡಿಆರ್‌ಬಿ-1/ ಎಸ್.ಸಿ.01/2001-02 ದಿನಾಂಕ:27.05.2002ರಲ್ಲಿ ಪಡೆದ ಅವಾರ್ಡ್‌ನ್ನು ಅಮಲ್ಜಾರಿಗೊಳಿಸಿ ಕೆಳಕಂಡ ಆಸ್ತಿಯನ್ನು ದಿನಾಂಕ:29.08.2005ರಂದು ಸಂಘದ ಹೆಸರಿಗೆ ನಿಲ್ಲಿಸಲಾಗಿತ್ತು. ಈ ಆಸ್ತಿಯನ್ನು ಯಾವುದೇ ಬಿಡ್ಡುದಾರರಿಲ್ಲದ ಕಾರಣ ಮಾರಾಟ ಮಾಡಲು ಸಾಧ್ಯವಾಗಿರುವುದಿಲ್ಲವೆಂದು ದೃಢಪಡಿಸಿಕೊಳ್ಳಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಕಾಯಿದೆಯ ಕಲಂ 101ಬಿ ಅನ್ವಯ ದಾವೆಯಲ್ಲಿನ ಜಡ್ಜ್‌ಮೆಂಟ್ ಡೆಟಾರ್‌ನ ಸದರಿ ಆಸ್ತಿಯಲ್ಲಿನ ಹಕ್ಕು ಬಾಧ್ಯತೆಗಳು ಸಂಘದ ಹೆಸರಿಗೆ ನಿಹಿತಗೊಂಡಿರುತ್ತದೆ ಮತ್ತು ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಇದನ್ನು ಸಂಘಕ್ಕೆ ವರ್ಗಾಯಿಸತಕ್ಕದ್ದು.

**ಷೆಡ್ಯೂಲ್ ಆಸ್ತಿಗಳ ವಿವರ**

ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಸೊಣ್ಣೇನಹಳ್ಳಿ ಗ್ರಾಮದ ಸರ್ವೆ ನಂ.29/1, ಮನೆ ನಂ.2, ಖಾತೆ ನಂ.59 ರಲ್ಲಿನ 5 ಚದರ ಅಡಿ, ಆರ್.ಸಿ.ಸಿ. ಮನೆ ಪೂರ್ವ-ಪಶ್ಚಿಮ: 56 ಅಡಿ, ಉತ್ತರ-ದಕ್ಷಿಣ 65 ಅಡಿ ನಿವೇಶನ ಹೊರತುಪಡಿಸಿ ಪೂರ್ವ-ಪಶ್ಚಿಮ 89 ಅಡಿ, ಉತ್ತರ-ದಕ್ಷಿಣ 100 ಅಡಿ ನಿವೇಶನದಲ್ಲಿರುವ ಕಟ್ಟಡಗಳು ಹಾಗೂ ಸದರಿ ನಿವೇಶನದಲ್ಲಿರುವ ಜ್ಞಾನೇಶ್ ಸ್ಕೂಲ್ ಆಫ್ ನರ್ಸಿಂಗ್ ಕಟ್ಟಡ ಮತ್ತು ಈ ಕಟ್ಟಡದ ಬಲ ಭಾಗದ ಎದುರಿಗೆ ಇರುವ ನೆಲ ಅಂತಸ್ತು ಮತ್ತು ಮೊದಲನೇ ಮಹಡಿ ಕಟ್ಟಡ ಮತ್ತು ಇದಕ್ಕೆ ಚೆಕ್ಕುಬಂದಿ:

**ಪೂರ್ವಕ್ಕೆ** - ಬೇರೆಯವರ ಸ್ವತ್ತು

**ಪಶ್ಚಿಮಕ್ಕೆ** - ಸರ್ವೆ ನಂ.29ರ ಸ್ವತ್ತು

**ಉತ್ತರಕ್ಕೆ** - ಸರ್ವೆ ನಂ.27 ಮತ್ತು 28ರ ತೀರ್ಪು ಸಾಲಗಾರರ ಸ್ವತ್ತು

**ದಕ್ಷಿಣಕ್ಕೆ** - ಬೇರೆಯವರ ಸ್ವತ್ತು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
2ನೇ ವಲಯ, ಬೆಂಗಳೂರು.

ಪಿ.ಆರ್.100

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ

**ವಿಷಯ:** ಸಮಾಪನೆಗೊಂಡಿರುವ ಸಣ್ಣ ನೀರಾವರಿ ನೀರುಬಳಕೆದಾರರ ಸ.ಸಂ.ನಿ., ಅಣಜಿ, ದಾವಣಗೆರೆ ತಾ: ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3)ರನ್ವಯ ಪುನಃಶ್ಚೇತನಗೊಳಿಸಲು ಆದೇಶಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವೆ ಪತ್ರ ದಿನಾಂಕ:16.11.2006.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಸ್ಥಗಿತಗೊಂಡಿದ್ದು ಸದಸ್ಯರು ಹಾಗೂ ಆಡಳಿತ ಮಂಡಳಿ ನಿರ್ದೇಶಕರಿಗೆ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಆಸಕ್ತಿ ಹೊಂದಿರುವ ಕಾರಣ ಉಲ್ಲೇಖ (1)ರ ಆದೇಶದ ರೀತ್ಯಾ ಸಮಾಪನೆಗೊಳಿಸಿ ಹಾಗೂ ಸಹಕಾರ ಸಂಘಗಳ ನಿರೀಕ್ಷಕರು, ದಾವಣಗೆರೆ 1ನೇ ವೃತ್ತ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿರುತ್ತದೆ. ದಿನಾಂಕ:25.07.2006ರಂದು ಅಣಜಿ ಗ್ರಾಮಸ್ಥರು ಗ್ರಾಮಸಭೆ ಜರುಗಿಸಿ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ನೀಡುವಂತೆ ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಇವರನ್ನು ಕೋರಲು ಸರ್ವಾನುಮತದಿಂದ ತೀರ್ಮಾನಿಸಿರುತ್ತಾರೆ.

ಸಂಘದ ಬೈಲಾ ಉದ್ದೇಶದ ಅನುಸಾರ ರೈತರಿಗೆ ನೀರಿನ ತೊಂದರೆಯನ್ನು ನಿವಾರಿಸಲು ಮತ್ತು ದುರಸ್ಥಿ ಕಾರ್ಯಗಳನ್ನು ನಡೆಸಲು ಅನುಕೂಲಕರವಾದ ಭೂ ಪ್ರದೇಶವಿದ್ದು, ಹಾಗೂ ಸಣ್ಣ ನೀರಾವರಿ ಇಲಾಖೆಯಿಂದ ರೈತರಿಗೆ ಅನುಕೂಲಗಳು ದೊರೆಯುವ ಉದ್ದೇಶಗಳು ಇರುವುದರಿಂದ ಈ ಗ್ರಾಮಕ್ಕೆ ಸದರಿ ಸಂಘವು ಅವಶ್ಯವಿರುವುದರಿಂದ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡುವಂತೆ ಉಲ್ಲೇಖ (2)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಶಿಫಾರಸ್ಸು ಮಾಡಿರುತ್ತಾರೆ. ಈ ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಲು ಈ ಕೆಳಕಂಡ ಕ್ರಿಯಾ ಯೋಜನೆ ರೀತ್ಯಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪ್ರಗತಿ ಸಾಧಿಸುವ ಷರತ್ತಿಗೊಳಪಟ್ಟು ಈ ಕೆಳಕಂಡ ಆದೇಶ ಹೊರಡಿಸಿದೆ.

| ಕ್ರ. ಸಂ. | ವಿವರ | 2006-07 | 2007-08 | 2008-09 | 2009-10 | 2010-11 |
|---|---|---|---|---|---|---|
| 1. | ಸದಸ್ಯತ್ವ | 60 | 85 | 95 | 115 | 120 |
| 2. | ಷೇರು ಬಂಡವಾಳ | 0.60 | 0.85 | 0.95 | 1.15 | 1.20 |

**ಆದೇಶ**

**ನಂ.ಡಿಆರ್/ ಡಿವಿಜಿ/ ಸಮಾಪನೆ/ ಸಿಆರ್26/ 2006-07, ದಿನಾಂಕ:30ನೇ ಡಿಸೆಂಬರ್, 2006**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್‌ಎಮ್: 2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಾವಣಗೆರೆ ಜಿಲ್ಲೆ, ಸಹಕಾರ ಸಂಘಗಳ ಉಪ ನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಣ್ಣ ನೀರಾವರಿ ನೀರುಬಳಕೆದಾರರ ಸ.ಸಂ.ನಿ., ಅಣಜಿ, ದಾವಣಗೆರೆ ತಾ: ಇದರ ಉಲ್ಲೇಖ (1)ರ ಸಮಾಪನಾದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

ಜನವರಿ 2007ರ ಮಾಹೆಯ ಅಂತ್ಯದೊಳಗೆ ಸಂಘದ ಪ್ರಥಮ ಮಹಾ ಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗೆ ಸೂಚಿಸಿದ ಹಾಗೂ ನೂತನ ಆಡಳಿತ ಮಂಡಳಿಯನ್ನು ಸಹಕಾರ ಸಂಘಗಳ ನಿರೀಕ್ಷಕರು, ದಾವಣಗೆರೆ 1ನೇ ವೃತ್ತ ಇವರನ್ನು ಚುನಾವಣಾಧಿಕಾರಿಯಾಗಿ ನೇಮಿಸಲಾಗಿದೆ. ಈ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಆದೇಶಿಸಿದೆ. ಹಾಗೂ ಆಡಳಿತ ಮಂಡಳಿ ಮತ್ತು ಕಾರ್ಯದರ್ಶಿಯವರ ಆರು ತಿಂಗಳ ಅವಧಿಯಲ್ಲಿ ಎಲ್ಲಾ ನ್ಯೂನ್ಯತೆಗಳನ್ನು ಸರಿಪಡಿಸಿಕೊಂಡು ಕಾರ್ಯ ನಿರ್ವಹಿಸುವಲ್ಲಿ ವಿಫಲರಾದಲ್ಲಿ ಸಂಘವನ್ನು ನೇರವಾಗಿ ಸಮಾಪನೆಗೊಳಿಸುವುದಾಗಿ ತಿಳಿಯುವುದು.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮೊಹರಿನೊಂದಿಗೆ ದಿನಾಂಕ:30.12.2006ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,<br>ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.102

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ

**ವಿಷಯ:** ಸಮಾಪನೆಗೊಂಡಿರುವ ತನ್ಮಯ ಮಹಿಳಾ ವಿವಿಧೊದ್ದೇಶ ಸಹಕಾರ ಸಂಘ ನಿ., ದಾವಣಗೆರೆ ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3)ರನ್ವಯ ಪುನಃಶ್ಚೇತನಗೊಳಿಸಲು ಆದೇಶಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಸಮಸಂಖ್ಯೆ ಆದೇಶ ದಿನಾಂಕ:17.03.2006.

2) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ ಡಿವಿಜಿ/ ಎಲ್‌ಕ್ಯೂಡಿ/ ಸಿಆರ್-11/ 06-07, ದಿನಾಂಕ:20.06.2006.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರ ಪತ್ರ ಸಂಖ್ಯೆ: ಸನಿ 31/ ಸಮಾಪನೆ/ ರೂಪಾಯಿಪಸಸಂ/ 2006-07 ದಿನಾಂಕ:03.11.2006.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಕಳೆದ 3-4 ವರ್ಷಗಳಿಂದ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಆದೇಶದ ರೀತ್ಯಾ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ದಾವಣಗೆರೆ, ವೃತ್ತ-2 ಇವರನ್ನು ಸಮಾಪನಾದಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ಉಲ್ಲೇಖ (2)ರ ಆದೇಶದ ರೀತ್ಯಾ ಹಾಲಿ ಸಮಾಪನಾಧಿಕಾರಿಗಳ ಸ್ಥಾನಕ್ಕೆ ಶ್ರೀ ಎ.ಕೆ. ಹನುಮಂತಪ್ಪ ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಸಂಗಗಳ ಸಹಾಯಕ ನಿಬಂಧಕರು ಕಛೇರಿ ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ದಿನಾಂಕ:25.09.2006ರಂದು ಸಂಘದ ಅಧ್ಯಕ್ಷರಾದ ಶ್ರೀಮತಿ ರಾಜೇಶ್ವರಿ ಇವರ ಅಧ್ಯಕ್ಷತೆಯಲ್ಲಿ ಜರುಗಿದ ಸಂಘದ ಸರ್ವಸದಸ್ಯರ ಸಭೆಯಲ್ಲಿ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘದ ಕಾರ್ಯಚಟುವಟಿಕೆಗಳನ್ನು ಮುಂದುವರಿಸಿಕೊಂಡು ಹಾಗೂ ರೂಪಿಸಿಕೊಂಡಿರುವ 5 ವರ್ಷಗಳ

